

# ನಿಮಗೆ ಬೇಕಾದ ವಸ್ತುಗಳು:

4 ಖಾಲಿ ಬೆಂಕಿ ಪೆಟ್ಟಿಗೆಗಳು.
ದುಂಡಗಿನ ಒಂದು ಕೋಲು/ದಪ್ಪ
ಕಾರ್ಡ್ ಪೇಪರ್ ಸುರುಳಿ.
ಮೆದುವಾದ ರಟ್ಟು (ಕಿವಿಗಳಿಗೆ)
ಫೆಲ್ಟ್ ಪೇಪರ್,
ಫೆವಿಕಾಲ್ ಎಮ್ ಆರ್ ಎಡ್‌ಹೇಸಿವ್

**1** ಬೆಂಕಿ ಪೆಟ್ಟಿಗೆಯ ಹೊರಭಾಗವನ್ನು ಅರ್ಧಕ್ಕೆ ಕತ್ತರಿಸಿರಿ. ಅದು ಜಿರಾಫೆಯ ತಲೆ. ಫೆಲ್ಟ್ ಪೇಪರನ್ನು ಅದರ ಸುತ್ತಲೂ ಅಂಟಿಸಿರಿ.



**2** ಬೆಂಕಿ ಪೆಟ್ಟಿಗೆಯ ಅಂಚಿಗೆ ಕೋಲಿನ ಒಂದು ತುದಿಯನ್ನು ಜೋಡಿಸಿರಿ.



**3** ರಟ್ಟಿನಿಂದ ಕಿವಿಗಳನ್ನು ಕತ್ತರಿಸಿ ಬೆಂಕಿ ಪೆಟ್ಟಿಗೆಯ ಎರಡೂ ಬದಿಗಳಿಗೆ ಅಂಟಿಸಿರಿ.



**4** ದೇಹ ಮಾಡಲು, ಮೂರು ಬೆಂಕಿ ಪೆಟ್ಟಿಗೆಗಳನ್ನು ಸೇರಿಸಿ ಮತ್ತು ಕೋಲಿನ ಇನ್ನೊಂದು ತುದಿಗೆ ಜೋಡಿಸಿರಿ. ಕತ್ತಿಗೆ ಮತ್ತು ದೇಹವನ್ನು ಫೆಲ್ಟ್ ಪೇಪರ್‌ನಿಂದ ಸುರುಳಿ ಅಂಟಿಸಿರಿ.



**5** ಚುಕ್ಕೆಗಳನ್ನು ಮಾಡಲು, ಬೇರೆ ಬೇರೆ ಬಣ್ಣದ ಫೆಲ್ಟ್ ಪೇಪರನ್ನು ವೃತ್ತಾಕಾರದಲ್ಲಿ ಕತ್ತರಿಸಿರಿ ಅಥವಾ ಪಂಚ್ ಮಾಡಿರಿ. ಅದನ್ನು ಅಂಟಿಸಿರಿ. ಕಣ್ಣು ಮತ್ತು ಬಾಯಿಯನ್ನು ಅಂಟಿಸಿರಿ.



**6** ತೆಳು ರಟ್ಟಿನ ಉದ್ದನೆಯ ಪಟ್ಟಿಯೊಂದನ್ನು ಕತ್ತರಿಸಿ ಎರಡೂ ತುದಿಗಳನ್ನು ಸುರುಳಿ ಮಾಡಿರಿ.



**7** ಅದನ್ನು ಜಿರಾಫೆಯ ತಲೆಯ ಮೇಲೆ ಸಿಕ್ಕಿಸಿರಿ, ಎಂಥಾ ಯುಕ್ತಿ, ಏನಾಶ್ಚರ್ಯ! ನಿಮ್ಮ ಜಿರಾಫೆ ನಿಮ್ಮೆದುರೇ ನಿಂತಿದೆ!



## ಫೆವಿಕಾಲ್® ಎಮ್ ಆರ್
ಸಿಂಥೆಟಿಕ್ ಎಡ್‌ಹೇಸಿವ್

**ಅತ್ಯುತ್ತಮವಾದ ಅಂಟಿಸುವ ಕೆಲಸ ಮಾಡಲು,
ಅತ್ಯುತ್ತಮವಾದುದನ್ನೇ ಬಳಸಿರಿ.**

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಸುಖದುಃಖಗಳನ್ನು ಸರಿಸಮಾನವಾಗಿ ಎಣಿಸುವವರು ಸಾಧುಗಳೆಂಬುದು ನಿಜವಾದರೂ, ಲೋಕದ ಜನರ ನಡುವೆ ತಿರುಗುತ್ತಿರುವವರಾದರೆ, ಅವರು ಸಾಧಾರಣ ಜನರೆಲ್ಲಾ ತಮ್ಮನ್ನು ಸೇವಿಸಬೇಕೆಂದೂ, ಗೌರವಿಸಬೇಕೆಂದೂ ತಿಳಿಯುವುದು ಸರಿಯೆ ? ಊರ ಜನರ ಗೌರವಾದರಣೆ ಬೇಕೆಂಬ ಸಾಧುಗಳು ಜನರಿಗೂ ಸಹಾಯ ತೋರಿಸಬೇಡವೆ ? ಈ ಸಂಚಿಕೆಯ "ಸಾಧುವರ್ತನೆ" ಎಂಬ ಸಣ್ಣ ಕಥೆ ಈ ಬಗೆಯ ಪ್ರಶ್ನೆಗಳನ್ನೆಬ್ಬಿಸಿ ಉತ್ತರವನ್ನೂ ಹೊಂದಿಸುತ್ತದೆ.

## ಅಮರವಾಣಿ

ಚಲತ್ಕಾಷ್ಠೋ ಜ್ವಲತ್ಯಗ್ನಿಃ ಕ್ರುದ್ಧಃ ಸರ್ಪೋ ವಿಜೃಂಭತೇ
ಕ್ಷೋಭಾದೇವ ಮನುಷ್ಯಸ್ಯ ಶಕ್ತೇಃ ಪ್ರಾಯೋ ವಿಜೃಂಭಣಮ್

ಉರಿಯುವ ಸೌದೆಗಳನ್ನು ಕದಲಿಸಿದರೆ ಅಗ್ನಿ ಜ್ವಲಿಸುತ್ತದೆ. ಕೋಪ ಉಂಟಾದಾಗ ಹಾವು ಭುಸುಗುಡುತ್ತದೆ. ಕಷ್ಟಗಳು ಮೇಲೆ ಬಿದ್ದಾಗಲೇ ಮನುಷ್ಯನ ಶಕ್ತಿ ಸಾಮರ್ಥ್ಯಗಳು ಹೊರ ಬೀಳುತ್ತವೆ.

ಸಂಪುಟ : ೭೧ ಸೆಪ್ಟೆಂಬರ್ '೮೩ ಸಂಚಿಕೆ : ೩

ಬಿಡಿ ಪ್ರತಿ ರೂ. ೨-೦೦ :: ವಾರ್ಷಿಕ ಚಂದಾ ರೂ. ೨೪-೦೦



# ಚಂದಮಾಮನ ಹರಟೆ



## ಮಾತು ಕಲಿತ ಜಲಚರ

ಇಂಗ್ಲೆಂಡಿನ ಬೋಸ್ಟನ್ ನಗರದ ಜಲಚರ ಪ್ರದರ್ಶನ ಶಾಲೆಯಲ್ಲಿರುವ 'ಸೀಲ್' ಎಂಬ ಜಲಚರ ಪ್ರಾಣಿ ಮೂರು ಇಂಗ್ಲಿಷ್ ಮಾತು ಕಲಿತಿದೆ. ಹತ್ತು ವರ್ಷ ಪ್ರಾಯದ ಈ ಸೀಲ್ ಅಲ್ಲಿಗೆ ಬರುವವರನ್ನು "ಹಲೋ... ಹೀಗೆ ಬನ್ನಿ." "ಹೇಗಿದ್ದೀರಿ ?" ಎಂದು ಮಾತಾಡಿಸುತ್ತದೆ. ಬೇಸರವಾಗಿ ಬಿಟ್ಟರೆ "ಹೋಗಿಬಿಡಿ ಇಲ್ಲಿಂದ" ಎಂದು ಹೇಳಿಬಿಡುತ್ತದೆ. ಅಲ್ಲಿಗೆ ಬರುವವರಿಂದಲೇ ಸೀಲ್ ಈ ಮಾತುಗಳನ್ನು ಕಲಿಯಿತೆಂದು ಅಧಿಕಾರಿಗಳು ಭಾವಿಸುವರು.

---

## ಹಂತಕರನ್ನು ಹಿಡಿದ ಕೋತಿ



ಚೈನಾದ ಯೂನಾನ್ ಪಟ್ಟಣದ ಬೀದಿಯಲ್ಲಿ ಒಂದು ಕೋತಿ ಅಲ್ಲಿರುವವರನ್ನು ತನ್ನ ಹಿಂದೆ ಬರುವಂತೆ ಏನೇನೋ ಚೇಷ್ಟೆಗಳಿಂದ ಸೈಗೆ ಮಾಡತೊಡಗಿತು. ಅದನ್ನು ಅರ್ಥಮಾಡಿಕೊಂಡ ಒಂದು ಗುಂಪು ಅದರ ಹಿಂದೆ ನಡೆಯಲು, ಅದು ಅವರನ್ನೊಂದು ನಿರ್ಜನ ಪ್ರದೇಶಕ್ಕೆ ಒಯ್ದಿತು. ಅಲ್ಲಿ ಒಬ್ಬ ಮನುಷ್ಯ ಕೊಲೆಯಾಗಿ ಬಿದ್ದಿದ್ದ. ಅಷ್ಟೇ ಅಲ್ಲ, ಆ ಕೋತಿ ಕೂಡಲೇ ಜನರ ಮಧ್ಯದಲ್ಲಿದ್ದ ಇಬ್ಬರನ್ನು ಹಿಡಿದುಕೊಂಡಿತು. ಅನಂತರ ನಡೆದ ಪೋಲೀಸು ವಿಚಾರಣೆಯಲ್ಲಿ ಅವರಿಬ್ಬರೇ ಆ ಕೊಲೆಯನ್ನು ಮಾಡಿದವರೆಂದೂ, ಆ ಕೋತಿ ಸತ್ತ ಮನುಷ್ಯನ ಸಾಕು ಪ್ರಾಣಿಯೆಂದೂ ತಿಳಿದುಬಂದಿತು.

---



## ನಕ್ಷತ್ರ ಸಂದೇಶ ?

ಕಳೆದ ವರ್ಷ ಜೂನ್ ೨೧ನೇ ತಾರೀಕು ರಾತ್ರಿ ಸ್ಪೈಯಿನ್ ದೇಶದ ಲಾಗ್ರೋನೋ ಎಂಬ ಊರಿನಲ್ಲಿ ಜೇವಿಯರ್ ಬಾಸ್ಕ್ ಎಂಬ ಮತ ವಿದ್ಯಾರ್ಥಿ ಓದುತ್ತಿರುವಾಗ ಅವನ ಕೋಣೆಯಲ್ಲಿ ವೃತ್ತಾಕಾರವಾದ ಒಂದು ಬೆಳಕು ಪ್ರವೇಶಿಸಿತು. ಆಗ ಆ ಕೋಣೆಯಲ್ಲಿದ್ದ ರೇಡಿಯೋ ವಿಚಿತ್ರ ಶಬ್ದ ಹೊರಡಿಸ ತೊಡಗಿತು. ಜೇವಿಯರ್ ಬಾಸ್ಕ್ ಆ ಧ್ವನಿಯನ್ನು ರಿಕಾರ್ಡ್ ಮಾಡಿದನು. ಅದನ್ನು ಪರಿಶೀಲಿಸಿದ ವಿಲ್ಲೀ ಸ್ಮಿತ್ ಎಂಬ ವಿಜ್ಞಾನಿ ಅದು ಅಂತರಿಕ್ಷ ಗ್ರಹಗಳಿಂದ ಅಥವಾ ಹಾರುವ ತಟ್ಟೆಯಿಂದ ಬಂದ ಶಬ್ದವೋ ಸಂದೇಶವೋ ಆಗಿರಬೇಕೆಂದು ಭಾವಿಸುತ್ತಾನೆ.

---

## ನಿಮಗೆ ಗೊತ್ತೇ?

೧. "ಭವನಗಳ ನಗರ" ಎಂದು ಪ್ರಸಿದ್ಧಿ ಪಡೆದ ನಗರ ಯಾವುದು ?

೨. "ಏಳು ಬೆಟ್ಟಗಳ ನಗರ" ಎಂದು ಯಾವ ನಗರದ ಹೆಸರು? ಏತಕ್ಕಾಗಿ ಆ ಹೆಸರು ಬಂತು?

೩. "ಸ್ವರ್ಣದ್ವಾರ ನಗರ" ಎಂದು ಹೆಸರುಪಡೆದ ನಗರ ಯಾವುದು ?

೪. "ಮೂವರು ರಾಜರ ನಗರ" ಎಂದು ಯಾವ ನಗರವನ್ನು ಕರೆಯುವರು ?

೫. "ಸಾಧುಗಳ ನಗರ" ಎಂದು ಯಾವ ನಗರಕ್ಕೆ ಯಾವುದರಿಂದ ಈ ಹೆಸರು ಬಂತು ?

೬. "ನೂರು ಶಿಖರಗಳ ನಗರ" ಎಂದು ಹೆಸರು ಪಡೆದ ನಗರ ಯಾವುದು ?

(ಉತ್ತರ ೬೪ ನೇ ಪುಟದಲ್ಲಿ)



# ಹತ್ತು ವರ್ಷಗಳ ರೋಗ

ಹಿಂದೆ ಶೃಂಗೀಪುರವೆಂಬ ಒಂದು ಗ್ರಾಮವಿದ್ದಿತು. ಅಲ್ಲಿ ಊರವರಿಗೆ ಏನಾದರೂ ಕೊಂಡುಕೊಳ್ಳಲು ಅಂಗಡಿ ಎಂದರೆ ಶೇಷಯ್ಯನದೊಂದೇ ಅಂಗಡಿ. ಅಲ್ಲಿ ಎಲ್ಲಾ ವಿಧವಾದ ಸರಕುಗಳೂ ಸಿಗುತ್ತವೆ. ಜನರ ಅಗತ್ಯಗಳನ್ನು ಗಮನಿಸಿದ ಶೇಷಯ್ಯ ಸರಕುಗಳಲ್ಲಿ ಕೈ ಸಡಿಲು ಬಿಟ್ಟೇ ಕಲಬೆರಿಕೆ ಮಾಡುತ್ತಿದ್ದ. ಅವನು ಕಲಬೆರಿಕೇ ಮಾಡುವನೆಂಬುದು ತಿಳಿದಿದ್ದರೂ ಜನರು ಉಸಿರೆತ್ತದೆ ಕೊಂಡುಕೊಳ್ಳುತ್ತಿದ್ದರು. ಕೊಂಡುಕೊಳ್ಳದೆ ಉಪಾಯವೂ ಇರಲಿಲ್ಲ. ಶೇಷಯ್ಯನಿಗೆ ಮೂಗಿನ ತುದಿಯಲ್ಲೇ ಕೋಪ ಬೇರೆ.

ಒಂದು ದಿನ ಆ ಊರಿಗೆ ಒಬ್ಬ ಪರದೇಶಿಯಂಥವನು ಬಂದನು. ಅವನು ನಸ್ಯಕೊಳ್ಳಲು ಶೇಷಯ್ಯನ ಅಂಗಡಿಗೆ ಬಂದು ಅಂಗಡಿಯಲ್ಲಿ ಅನೇಕ ಸರಕುಗಳು ಕಲಬೆರಿಕೆಯಾಗಿರುವುದನ್ನು ಗಮನಿಸಿದನು. ಅದನ್ನು ನೋಡಿ ಅವನು ಸುಮ್ಮನಿರದೆ ಶೇಷಯ್ಯ ನನ್ನು ನೋಡಿ, "ಈ ಊರಲ್ಲಿ ಪರಿಶುದ್ಧವಾದ ವಸ್ತುಗಳೇ ದೊರಕುವುದಿಲ್ಲವೆ ? " ಎಂದು ಕೇಳಿದನು.

ಪರದೇಶಿಯ ಪ್ರಶ್ನೆ ಕೇಳಿದ ಕೂಡಲೇ ಶೇಷಯ್ಯನು ಕೋಪದಿಂದ ಸಿಡಿಯುತ್ತ, "ಪರಿಶುಭ್ರತೆಯನ್ನು ಕುರಿತು ಪ್ರಶ್ನೆ ಮಾಡುವ ನೀನೆಂಥವನು ? ಏನು ಯೋಗ್ಯತೆಯಿದೆ ನಿನಗೆ ಹೀಗೆ ಕೇಳಲಿಕ್ಕೆ ? ಅಸಲು ನೀನು ಹೇಗಿರುವಿ ಎಂಬುದನ್ನು ನೋಡಿಕೊಂಡಿದ್ದೀಯಾ ? ನಿನ್ನ ಶರೀರವೂ ಬಟ್ಟೆಗಳೂ ಎಷ್ಟು ಗಲೀಜು ! ಥೀ ! ನಿನ್ನ ಕೈ ಮುಟ್ಟಿದ್ದರಿಂದಲೇ ಇಲ್ಲಿಯ ಸರಕುಗಳೆಲ್ಲಾ ಶುಭ್ರತೆ ಕಳೆದುಕೊಂಡುವು. ನಾನಾದ್ದರಿಂದ ನಿನ್ನನ್ನು ಸುಮ್ಮನೆ ಬಿಟ್ಟಿದ್ದೇನೆ. ಪಕ್ಕದ ಗ್ರಾಮದಲ್ಲಿರುವ ನನ್ನ ಅಳಿಯನ ಹತ್ತಿರ ಹೋಗಿ ಹೀಗೇನಾದರೂ ಕೇಳಿ ನೋಡು. ಎಲುಬಿನ ಚೂರು ಸಿಕ್ಕದ ಹಾಗೆ ಮಾಡುತ್ತಾನೆ." ಎಂದನು.

ಶೇಷಯ್ಯನ ಮಾತು ಕೇಳಿ ಪರದೇಶಿಗೂ ಕೋಪ ಬಂದಿತು. ಅವನೂ ಹುಬ್ಬೇರಿಸಿ ಕಣ್ಣು ತಿರುಗಿಸುತ್ತ "ನನ್ನನ್ನು ನೋಡಿ ಇಷ್ಟು ಹೀನಾಯವಾಗಿ ಮಾತಾಡುವೆಯಾ ? ನಿನಗೆ ಮಾನವತ್ವವಿದೆಯೇ ? ನಾನು ಈ ದೇಶವನ್ನಾಳುವ ವಿಜಯ ಭಾಸ್ಕರ ಮಹಾರಾಜರ ಮಂತ್ರಿ ರಾಮಭೂಷಣ ! ಮಾರುವೇಷದಲ್ಲಿ ಇಲ್ಲಿಗೆ ಬಂದಿದ್ದೇನೆಂದು ಗೊತ್ತಾದರೆ ನೀನು ಹೀಗೆಲ್ಲ ಮಾತಾಡುವೆಯಾ ?" ಎಂದನು. ಆ ಮಾತು ಕೇಳಿದ ಕೂಡಲೇ ಶೇಷಯ್ಯನು



ಜುಮ್ಮನೆ ಬೆವತು ಕೆಟ್ಟದೊಂದು ಕೂಗು ಹಾಕಿ, ತಲೆತಿರುಗಿ ಬಿದ್ದುಬಿಟ್ಟನು. ಸ್ಮೃತಿ ತಪ್ಪಿ ಹೋಯಿತು.

ಪರದೇಶಿ ಅಲ್ಲಿ ನಿಲ್ಲದೆ ನೆಟ್ಟಗೆ ಗ್ರಾಮಾಧಿಕಾರಿಯ ಮನೆಗೆ ಹೋಗಿ, ತಾನು ಯಾರೆಂಬುದನ್ನು ಹೇಳಿ, "ಶೇಷಯ್ಯನದು ಮೋಸದ ಅಂಗಡಿ ಎಂಬುದು ನಿನಗೆ ತಿಳಿಯದೇನು ? ನೀನು ಗ್ರಾಮಾಧಿಕಾರಿಯಾಗಿದ್ದು ಏನು ಪ್ರಯೋಜನ ? ಗ್ರಾಮದಲ್ಲಿ ಅನ್ಯಾಯಗಳೂ, ಮೋಸಗಳೂ ನಡೆಯಬಾರದೆಂದು ತಾನೇ ಗ್ರಾಮಾಧಿಕಾರಿಯನ್ನಿರಿಸುವುದು ? ಅಂಗಡಿ ಶೇಷಯ್ಯನ ಮೋಸಗಳನ್ನು ಕಣ್ಣಾರೆ ನೋಡಿಯೇ ನಾನು ಮಾತಾಡಿದ್ದು. ಕಲಬೆರಿಕೆ ಸಾಮಾನುಗಳನ್ನು ಮಾರುವವನಾದುದರಿಂದ ಅವನಿಗೂ, ಅವನ ತಪ್ಪನ್ನು ನೋಡುತ್ತಿದ್ದರೂ ಸುಮ್ಮನಿರುವ ನಿನಗೂ ಶಿಕ್ಷೆಯಾಗಬೇಕು. ಏನನ್ನುವೆ ?" ಎಂದನು.

ಗ್ರಾಮಾಧಿಕಾರಿ ಮಂತ್ರಿಯ ಮಾತುಗಳನ್ನು ಕೇಳಿ ತಬ್ಬಿಬ್ಬಾಗದೆ, "ಮಹಾ ಪ್ರಭೂ. ಕಲಬೆರಿಕೆ ಸರಕುಗಳನ್ನು ಮಾರುವನೆಂದರೆ ಅದು ಶೇಷಯ್ಯನೊಬ್ಬನದೇ ತಪ್ಪಲ್ಲ. ಅವನು ತಾನಾಗಿ ಕಲಬೆರಿಕೆ ಮಾಡುವುದೇನಲ್ಲ. ಅವನು ಕೊಂಡುಕೊಳ್ಳುವ ಸರಕುಗಳನ್ನೇ ಎಲ್ಲರಿಗೂ ಮಾರುತ್ತಾನೆ. ಬೆಳೆಗಳನ್ನು ಬೆಳೆಸುವ ರೈತರೇ ಧಾನ್ಯಗಳಲ್ಲಿ ಕಲಬೆರಿಕೆ ಮಾಡಿ ಮಾರುತ್ತಾರೆ. ಆದುದರಿಂದ ಶೇಷಯ್ಯ ಅಲ್ಪಸ್ವಲ್ಪ ಅಚೀಚೆ ಮಾಡಿ ಮಾರುತ್ತಿದ್ದರೂ ನಾನೇನೂ ಮಾಡಲಾಗಲಿಲ್ಲ. ಆದರೆ ಅವನು ಮಹಾಮಂತ್ರಿಗಳಾದ ನಿಮ್ಮ ಮುಂದೆ ದುರ್ಭಾಷೆಗಳನ್ನು ಆಡಿದುದನ್ನು ಮಾತ್ರ ಸಹಿಸಲಾರೆ. ಅದು ಕ್ಷಮಿಸಲಾಗದ ತಪ್ಪು. ಬಹುಶಃ ತಾವು ಯಾರೆಂದು ತಿಳಿಯದೆ ಹಾಗೆಲ್ಲಾ ಬಾಯಿಗೆ ಬಂದ ಹಾಗೆ ಮಾತಾಡಿದ. ತಿಳಿಯದೆ ಮಾಡಿದ ತಪ್ಪು" ಎಂದನು.

ಆ ಮಾತುಗಳಿಂದ ಮಂತ್ರಿ ಸ್ವಲ್ಪ ಶಾಂತನಾಗಿ, "ಕಲಬೆರಿಕೆ ವಿಷಯದಲ್ಲಿ ನೀನು ಹೇಳಿದ್ದು ನಿಜವಿರಬಹುದು. ಆದರೆ ಅವನು ಮನುಷ್ಯರೊಂದಿಗೆ ಸಮಾಧಾನದಿಂದ ಮಾತಾಡಲು ಕಲಿಯಬೇಕು. ನಾನು ಮಂತ್ರಿಯೆಂದು ಗೊತ್ತಾದರೂ ಗೊತ್ತಾಗದೆ ಹೋದರೂ ಮಾನಮರ್ಯಾದೆ ಕೊಡಬೇಡವೇನು ?" ಎಂದನು.

ಇಷ್ಟರೊಳಗೆ ಗ್ರಾಮಾಧಿಕಾರಿ ಕರೆಕಳುಹಿಸಿದ ಆಳಿನೊಂದಿಗೆ ಶೇಷಯ್ಯನು ಅಲ್ಲಿಗೆ ಬಂದನು. ಬಂದ ಕೂಡಲೇ ಅಲ್ಲಿರುವ ಮಂತ್ರಿಯ ಮುಂದೆ ಅಡ್ಡಬಿದ್ದು, ಅತ್ಯಂತ ವಿಧೇಯತೆಯಿಂದ ಕೈ ಮುಗಿದು, "ಮಹಾಸ್ವಾಮಿಯವರೇ ! ತಾವು ಯಾರೆಂದು ತಿಳಿಯದೆ ದೊಡ್ಡ ತಪ್ಪು ಮಾಡಿದೆನು. ನನ್ನ ತಪ್ಪನ್ನು ಕ್ಷಮಿಸಬೇಕು. ಆದರೆ ನಾನು ಮಾಡಿದ ಅಪರಾಧಕ್ಕೆ ಕೊರಡೆ ಶಿಕ್ಷೆ ವಿಧಿಸಿರಿ ಪ್ರಭೂ" ಎಂದನು.

ಶೇಷಯ್ಯನ ವಿನಯದಿಂದ ಮಂತ್ರಿ ಇನ್ನಷ್ಟು ಶಾಂತನಾಗಿ, "ನನ್ನನ್ನು ನೀನು ಬೈದುದಕ್ಕಾಗಿ ನನಗೇನೂ ಕೋಪವಿಲ್ಲ. ಆಗಲೇ ಕ್ಷಮಿಸಿದ್ದೇನೆ,

ಆದರೆ ನಿನ್ನ ಅಂಗಡಿಗೆ ಬರುವ ಜನರಿಗೆ ನೀನು ಮರ್ಯಾದೆ ಕೊಡುವುದಿಲ್ಲವೆಂದು ಗೊತ್ತಾಯಿತು. ಆ ತಪ್ಪನ್ನು ನಾನು ಕ್ಷಮಿಸಲಾರೆ. ಊರ ಜನರೇ ನಿನ್ನನ್ನು ಕ್ಷಮಿಸಬೇಕು. ಸಾಯಂಕಾಲ ಗ್ರಾಮದ ಜನರನ್ನೆಲ್ಲಾ ಸೇರಿಸಿ ನಿನ್ನನ್ನು ವಿಚಾರಿಸುತ್ತೇನೆ. ಈಗ ಹೋಗು " ಎಂದನು.

ಶೇಷಯ್ಯ ಅಲ್ಲಿಂದ ಹೊರಡುತ್ತ, ಈ ಗಂಡಾಂತರ ದಿಂದ ಹೇಗೆ ಹೊರ ಬೀಳುವುದೆಂದು ಆಲೋಚಿಸ ತೊಡಗಿದನು. ಗ್ರಾಮದಲ್ಲಿರುವ ಬಹಳ ಮಂದಿ ತನ್ನ ಮೇಲೆ ಸಿಟ್ಟಿನಿಂದಿರುವರೆಂದು ಅವನು ಬಲ್ಲನು. ಮಂತ್ರಿ ಅವರ ಮುಂದೆ ವಿಚಾರಣೆ ನಡೆಸಿದರೆ ತನಗೆ ಶಿಕ್ಷೆ ತಪ್ಪಲಾರದು.

ಸಾಯಂಕಾಲದ ವರೆಗೂ ಶೇಷಯ್ಯ ಊರೆಲ್ಲಾ ತಿರುಗಿ, ತನಗೆ ಬಂದ ಕಷ್ಟವನ್ನು ಎಲ್ಲರೊಂದಿಗೂ ಹೇಳಿಕೊಂಡು, ತನ್ನನ್ನು ಕಾಪಾಡಬೇಕೆಂದು ಕೇಳಿ ಕೊಂಡನು. ಅದಕ್ಕೆ ಪ್ರತಿಫಲವಾಗಿ ಕೆಲವರಿಗೆ ಚಿಲ್ಲರೆ ಬಾಕಿಗಳಿರುವುದನ್ನು ರದ್ದು ಪಡಿಸಿದನು. ಮತ್ತೆ ಕೆಲವರಿಗೆ ಅಗ್ಗದಲ್ಲಿ ಸಾಮಾನುಗಳನ್ನು ಕೊಡುವೆನೆಂದನು.

ಅನೇಕರು ಅವನ ಮೇಲೆ ಕನಿಕರಗೊಂಡು ಸಹಾಯ ಮಾಡುವೆವೆಂದು ಮಾತುಕೊಟ್ಟರು. ಊರಿಗೆಲ್ಲಾ ಶೇಷಯ್ಯನದೊಂದೇ ಅಂಗಡಿಯಾದು ದರಿಂದ, ಅವನಿಗೇನಾದರೂ ಕಠಿಣವಾದ ಶಿಕ್ಷೆ ಬಿದ್ದು ಬಿಟ್ಟರೆ, ಮತ್ತೊಬ್ಬ ಅಂಗಡಿಗಾರನು ಬರುವವರೆಗೆ, ಕಷ್ಟದಲ್ಲಿ ಬೀಳಬೇಕಾಗುವುದೆಂದು ಕೆಲವರಿಗೆ ಭಯ ವಾಯಿತು.

ಆ ದಿನ ಸಾಯಂಕಾಲ ಊರವರ ಸಭೆಯ ಮುಂದೆ ನಿಂತು ಶೇಷಯ್ಯ ಹೀಗೆ ಹೇಳಿದನು : " ಅಯ್ಯ ಗಳಿರಾ, ನಾನು ನಿಜಕ್ಕೂ ಶಾಂತಸ್ವಭಾವದವನು. ಯಾರೇನು ಹೇಳಿದರೂ ಬೇಸರ ಪಡುವವನಲ್ಲ. ನಿನ್ನೆ ನನಗೆ ಆರೋಗ್ಯವೇ ಸರಿಯಾಗಿರಲಿಲ್ಲ. ಆರೋಗ್ಯ



ಸರಿಯಾಗಿಲ್ಲದಿರುವಾಗ ಮಾತ್ರ ನಾನು ಕೋಪ ದಿಂದಿರುತ್ತೇನೆ. ಈ ಸಂಗತಿ ನಿಮಗೆಲ್ಲಾ ಗೊತ್ತಿದೆ ಯಷ್ಟೇ ?"

ಅಲ್ಲಿ ಸೇರಿದ ಜನರೆಲ್ಲ ಶೇಷಯ್ಯ ಹೇಳಿದುದು ನಿಜವೆಂದು ಹೇಳಿದರು. ಆಗ ಮಂತ್ರಿ ಏನೋ ಹೇಳಬೇಕೆಂದಿರುವಾಗ, ಜನರ ಮಧ್ಯದಿಂದ ಶೇಷಯ್ಯನ ಕೆಲಸದವನು ಎದ್ದು ಓಡಿಬಂದು, ಅವನ ಕಾಲಿಗೆ ಅಡ್ಡ ಬಿದ್ದು, " ಅಯ್ಯಾ, ನೀವು ದಿನಾ ನನ್ನನ್ನು ಅದಕ್ಕೇ ಇದಕ್ಕೇ ಬೈಯುತ್ತಾ ಇರುವುದನ್ನು ನೋಡಿ ಅದು ನಿಮ್ಮ ಕೆಟ್ಟ ಸ್ವಭಾವವೆಂದೇ ತಪ್ಪಾಗಿ ತಿಳಿದಿದ್ದೆ. ಒಂದೊಂದು ಸಾರಿ ಕೋಪದಿಂದ ನಿಮ್ಮ ತಲೆಯನ್ನು ಒಡೆಯ ಬೇಕೆಂತಲೂ ನನಗೆ ಕಾಣುತ್ತಿತ್ತು. ನೀವು ಯಾವಾಗಲೂ ನನ್ನನ್ನು ಬೈಯುತ್ತಾ ಇರಲು ನಿಜವಾದ ಕಾರಣ ನಿಮ್ಮ ಅನಾರೋಗ್ಯವೆಂದು ಈಗ ತಾನೇ ಗೊತ್ತಾಯಿತು. ನನ್ನ ತಪ್ಪನ್ನು ಕ್ಷಮಿಸಿರಿ ಅಯ್ಯಾ " ಎಂದನು.

ಶೇಷಯ್ಯ ಅವನನ್ನು ಎಬ್ಬಿಸಿ, "ತಪ್ಪುಗಳನ್ನು ಎಲ್ಲರೂ ಮಾಡುತ್ತಾರಪ್ಪಾ. ನಾನು ನಿನ್ನನ್ನು ಕ್ಷಮಿಸಿದ್ದೇನೆ. ಆಯಿತಷ್ಟೇ ?" ಎಂದನು.

ಆ ಕೆಲಸದವನು ಆಮೇಲೆ ಮಂತ್ರಿಯ ಕಾಲಿಗೆ ಅಡ್ಡ ಬಿದ್ದನು. ಮಂತ್ರಿ ಅವನನ್ನು ಎಬ್ಬಿಸಿ, "ನಿನ್ನ ಯಜಮಾನನನ್ನು ಶಿಕ್ಷಿಸದೆ ಬಿಡುವುದಕ್ಕೆ ನನ್ನ ತಲೆಯನ್ನು ಒಡೆಯಬೇಕೆಂದು ತೋರುತ್ತದೋ ನಿನಗೆ ?" ಎಂದು ಕೇಳಿದನು.

ಕೆಲಸದವನು ಮೋರೆ ಬಾಡಿಸಿಕೊಂಡು, "ಹಾಗೇನಿಲ್ಲ ದೊರೆಗಳೇ. ನನ್ನ ಯಜಮಾನರ ಆರೋಗ್ಯ ಚೆನ್ನಾಗಿಲ್ಲದಿರುವಾಗಲೇ ಅವರು ಕೋಪವಾಗಿರುವರೆಂದು ಗೊತ್ತಾಯಿತಷ್ಟೆ ? ನಾನು ಅವರ ಹತ್ತಿರ ಹತ್ತು ವರ್ಷಗಳಿಂದ ಕೆಲಸಮಾಡುತ್ತಿದ್ದೇನೆ. ಪ್ರತಿ ದಿನವೂ ಅವರು ನನ್ನ ಮೇಲೆ ತುಂಬ ಸಿಟ್ಟಿನಿಂದ ಉರಿದುರಿದು ಬೀಳುತ್ತಾ ಇರುತ್ತಾರೆ. ಅಂದರೆ ಅವರು ಹತ್ತು ವರ್ಷಗಳಿಂದಲೂ ಯಾವುದೋ ರೋಗದಿಂದ ಸಂಕಟಪಡುತ್ತಿದ್ದರೆಂದೇ ಆಯಿತು. ಯಾವ ರೋಗವಾದರೂ ಬೆಳೆದು ಹೋಗಬಾರದಷ್ಟೆ? ನನ್ನ ಯಜಮಾನರಿಗೆ ತಕ್ಕ ವೈದ್ಯ ಮಾಡಿಸಬೇಕು ದೊರೆಗಳೇ" ಎಂದನು.

ಕೆಲಸದವನು ಹೇಳಿದ ಮಾತಿನಿಂದ ಶೇಷಯ್ಯನ ನಿಜ ಸ್ವರೂಪವು ಮಂತ್ರಿಗೆ ಗೊತ್ತಾಯಿತು. ಅವನು ಕೆಲಸದವನನ್ನು ನೋಡಿ ಮುಗುಳ್ನಗುತ್ತ, "ನಿನ್ನ ಯಜಮಾನನ ರೋಗಕ್ಕೆ ವೈದ್ಯನು ಏತಕ್ಕೆ ? ನಾನೇ ಮದ್ದು ಕೊಟ್ಟಿದ್ದೇನೆ. ಆ ಮದ್ದು ಎಷ್ಟರ ಮಟ್ಟಿಗೆ ಫಲಕ್ಕೆ ಬಂದಿದೆ ಎಂಬುದನ್ನು ನಿನ್ನಿಂದಲೇ ತಿಳಿದುಕೊಳ್ಳುತ್ತೇನೆ. ಗಮನಿಸುತ್ತಾ ಇರು" ಎಂದನು.

ಆಮೇಲೆ ಮಂತ್ರಿ ಶೇಷಯ್ಯನನ್ನು ನೋಡಿ, ಕಲಬೆರಿಕೆ ಸರಕುಗಳನ್ನು ಮಾರಬಾರದೆಂದೂ, ಬಂದ ಸರಕುಗಳಲ್ಲಿ ಕಲಬೆರಿಕೆ ಇದ್ದರೆ ಅವುಗಳನ್ನು ಶುದ್ಧಪಡಿಸಿ ಮಾರಬೇಕೆಂದೂ ಎಚ್ಚರಿಸಿದನು. ರೈತರು ಕಲಬೆರಿಕೆ ಮಾಡಿದರೆ ಆ ಸರಕುಗಳನ್ನು ಕೊಂಡುಕೊಳ್ಳದೆ, ಅವರ ಮೇಲೆ ಫಿರ್ಯಾದಿ ಮಾಡಬೇಕೆಂತಲೂ ಹೇಳಿದನು. ಇನ್ನು ಮೇಲೆ ಶೇಷಯ್ಯನ ಪ್ರವರ್ತನೆ ಹೇಗಿರುವುದೆಂದು ತಿಳಿದುಕೊಳ್ಳಲು, ತನ್ನ ಭಟರನ್ನು ಅವನ ಕೆಲಸದವನ ಬಳಿಗೆ ಕಳುಹಿಸುವುದಾಗಿಯೂ ಹೇಳಿದನು ಮಂತ್ರಿ.

ಮಂತ್ರಿ ಹೊರಟು ಹೋದ ಮೇಲೆ ಶೇಷಯ್ಯನಲ್ಲಿ ದೊಡ್ಡ ಬದಲಾವಣೆಯಾಯಿತು. ತನ್ನ ಯಜಮಾನನನ್ನು ಅನೇಕ ವರ್ಷಗಳಿಂದ ಹಿಡಿದು ಪೀಡಿಸುವ ರೋಗವನ್ನು ಮಂತ್ರಿಯವರು ಒಂದೇ ದಿನದಲ್ಲಿ ಗುಣಪಡಿಸಿದರೆಂದು, ಶೇಷಯ್ಯನ ಕೆಲಸದವನು ತನಗೆ ತಿಳಿದವರ ಹತ್ತಿರ ಆಶ್ಚರ್ಯದಿಂದ ಹೇಳುತ್ತಿದ್ದನು.





# ಮೃತ್ಯುಗಂಡ

ಕಥೆಯನ್ನು ಹೇಳಿಯೇ ಸೋಲಿಸಿಬಿಡಬೇಕೆಂಬ ಉಪಾಯ ಕಂಡುಹಿಡಿದ ಬೇತಾಳವನ್ನು ಮನದಲ್ಲೇ ಮೆಚ್ಚಿಕೊಳ್ಳುತ್ತ, ರಾಜಾ ತ್ರಿವಿಕ್ರಮನು ಮತ್ತೆ, ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ತನ್ನ ಹೆಗಲ ಮೇಲೆ ಹಾಕಿಕೊಂಡು, ಎಂದಿನಂತೆ ಮೌನವಾಗಿ ನಡೆಯ ತೊಡಗಿದನು. ಆಗ ಶವದೊಳಗೆ ಸೇರಿಕೊಂಡಿದ್ದ ಬೇತಾಳವು ಮಾತಾಡಲು ತೊಡಗಿ, "ರಾಜಾ, ಕೆಲವರಿಗೆ ಅನಾನುಕೂಲ ಪರಿಸ್ಥಿತಿಯಲ್ಲಿ ತಮ್ಮ ಶಕ್ತಿ ಸಾಮರ್ಥ್ಯಗಳು ವ್ಯರ್ಥವಾಗುವುದಲ್ಲದೆ, ಪ್ರತಿಬಂಧಕಗಳಾಗಿಯೂ ಮಾರ್ಪಡುತ್ತವೆ. ಹಾಗೇನೋ ಆದುದರಿಂದಲೇ ನೀನು ಈ ರಾತ್ರಿಯ ಹೊತ್ತಿನಲ್ಲಿ ಇಂತಹ ಕಷ್ಟದ ಕೆಲಸವನ್ನು ಹೆಗಲಿಗೇರಿಸಿಕೊಂಡಿರಬೇಕೆಂದು ನನ್ನ ಅನುಮಾನ. ಪರರಿಗೆ ಉಪಕಾರ ಮಾಡಲು ಹೋಗಿ ನಿನ್ನ ಹಾಗೆಯೇ ತೊಂದರೆಗೆ ಸಿಕ್ಕಿಕೊಂಡ ರಾಮಶಾಸ್ತ್ರಿ ಎಂಬ ಜ್ಯೋತಿಷ್ಕನ ಕಥೆಯನ್ನು ಹೇಳುತ್ತೇನೆ. ದಾರಿಯ ಕಷ್ಟ ಗೊತ್ತಾಗದಂತೆ ಕಥೆ ಕೇಳುತ್ತಾ ನಡೆ" ಎಂದು ಕಥೆಯನ್ನು ಹೇಳಲು ತೊಡಗಿತು :

ಬೇತಾಳಕಥೆಗಳು?..



ಪುಷ್ಕರ ದೇಶದಲ್ಲಿ ರಾಮಶಾಸ್ತ್ರಿ ಎಂಬ ದೊಡ್ಡ ಜೋಯಿಸನಿದ್ದನು. ಅವನು ಏನು ಹೇಳಿದರೂ ಅವೆಲ್ಲಾ ಅಕ್ಷರಶಃ ನೆರವೇರುತ್ತವೆಂದು ಎಲ್ಲರೂ ಹೇಳಿಕೊಳ್ಳುತ್ತಿದ್ದರು. ಅವನ ಖ್ಯಾತಿ ಕ್ರಮವಾಗಿ ರಾಜಧಾನಿಯವರೆಗೂ ಹೋಯಿತು. ರಾಜನು ರಾಮಶಾಸ್ತ್ರಿಗೆ ತನ್ನ ಬಳಿಗೆ ಆಗತ್ಯವಾಗಿ ಬರಬೇಕೆಂದು ಸುದ್ದಿ ಕಳುಹಿಸಿದನು.

ಮಹಾರಾಜನಾದ ವಿನಯಸೇನನಿಗೆ ಅರುವತ್ತು ವರ್ಷಗಳು ತುಂಬಿದ್ದುವು. ಆದರೂ ಅವನು ದೃಢವಾಗಿಯೂ, ಆರೋಗ್ಯಶಾಲಿಯಾಗಿಯೂ ಇದ್ದನು. ಅವನಿಗೆ ಅನೇಕ ವರ್ಷಗಳ ವರೆಗೆ ಮಕ್ಕಳಾಗದೆ, ಕಡೆಗೆ ಒಬ್ಬ ಮಗನು ಹುಟ್ಟಿದ್ದನು. ಸೂರ್ಯಸೇನನೆಂಬ ಆ ರಾಜಕುಮಾರನಿಗೆ ಈಗ ಇಪ್ಪತ್ತು ವರ್ಷ ವಯಸ್ಸಾಗಿತ್ತು. ಮಗನಿಗೆ ಪಟ್ಟಾಭಿಷೇಕಮಾಡಿ, ತಾನು ವಿಶ್ರಾಂತಿ ತೆಗೆದುಕೊಳ್ಳಬೇಕೆಂದು ರಾಜನ ಆಲೋಚನೆ. ಆದರೆ ಮಹಾರಾಜನಿಗೆ ನೂರು ವರ್ಷ ಆಯುರ್ದಾಯವಿದೆಯೆಂದೂ, ರಾಜ್ಯಭಾರದಂತಹ ಹೊರೆಯನ್ನು ಧರಿಸಿಕೊಳ್ಳಲು ಸೂರ್ಯಸೇನನಿಗೆ ವಯಸ್ಸು ಸಾಲದೆಂದೂ ಆಸ್ಥಾನ ಜೋಯಿಸರು ಅಭಿಪ್ರಾಯ ತಿಳಿಸಿದ್ದರು.

ಇದರೆಡೆಯಲ್ಲಿ ವಿನಯಸೇನ ಮಹಾರಾಜನಿಗೆ ಮಗನ ವಿಷಯದಲ್ಲಿ ಹೊಸ ಸಂಗತಿ ತಿಳಿದು ಬಂದಿತ್ತು. ಯುವರಾಜನಾದ ಸೂರ್ಯಸೇನನಿಗೆ ವಿಲಾಸ ಜೀವನದ ಮೇಲೆ ಮೋಜು ಬಿದ್ದಿದೆ ಎಂಬುದೇ ಹೊಸ ಸಂಗತಿ. ಅವನಿಗೆ ಈಗಲೇ ರಾಜ್ಯ ಭಾರದ ಹೊರೆಯನ್ನು ಹೊರಲು ಇಷ್ಟವಿಲ್ಲ. ಆದುದರಿಂದಲೇ ಅವನು ಆಸ್ಥಾನದ ಜೋಯಿಸರ ಮೇಲೆ ಒತ್ತಾಯ ತಂದು ತನಗೆ ಬೇಕಾದ ವಿಧದಲ್ಲಿ ತಂದೆಯೊಂದಿಗೆ ಹೇಳಿಸಿದ್ದಾನೆ. ಈ ಪರಿಸ್ಥಿತಿಯಲ್ಲಿ ಆಸ್ಥಾನದ ಜೋಯಿಸರ ಮೇಲೆ ರಾಜನ ನಂಬುಗೆ ತಗ್ಗಿತ್ತು. ಹೀಗಿರುವಾಗಲೇ ರಾಮಶಾಸ್ತ್ರಿಯ ಸಂಗತಿ ತಿಳಿದು ಬಂದು, ಆತನನ್ನು ಕರೆಯಿಸಿಕೊಂಡಿದ್ದನು.

ವಿನಯಸೇನನು ತನ್ನ ಪರಿಸ್ಥಿತಿಯನ್ನೆಲ್ಲಾ ರಾಮಶಾಸ್ತ್ರಿಯೊಂದಿಗೆ ಹೇಳಿ, "ಪಂಡಿತವರ್ಯರೇ, ಎಂತಹ ಸಂಕೋಚಕ್ಕೂ, ದಾಕ್ಷಿಣ್ಯಕ್ಕೂ, ಒತ್ತಾಯಕ್ಕೂ ಒಳಗಾಗದೆ ನೀವು ನಮ್ಮಿಬ್ಬರ ಜಾತಕಗಳನ್ನೂ ಪರಿಶೀಲಿಸಿ ಸತ್ಯ ಸಂಗತಿಯನ್ನು ಹೇಳಬೇಕು." ಎಂದನು.

ರಾಮಶಾಸ್ತ್ರಿ ಹಾಗೆಯೇ ಆಗಲೆಂದು ಒಪ್ಪಿಕೊಂಡು, ಮೊದಲು ವಿನಯಸೇನನ ಜಾತಕವನ್ನು ಪರಿಶೀಲನೆ ಮಾಡಿದನು. ಆಮೇಲೆ ಸೂರ್ಯಸೇನನ ಜಾತಕವನ್ನೂ ಪರೀಕ್ಷಿಸಿದನು. ಬಳಿಕ ರಾಜನನ್ನು ನೋಡಿ, "ಮಹಾಪ್ರಭೂ, ತಿಳಿದು ಬರುವ ಸಂಗತಿ ಆಶ್ಚರ್ಯವೂ ವಿಚಿತ್ರವೂ ಆಗಿದೆ. ಈ ದಿನವೇ ತಮ್ಮ ಚಿರಂಜೀವಿಗೆ ವಿವಾಹ ಜರುಗಲಿದೆ. ವಧುವಾಗುವವಳು ಬೇಡರ ಹುಡುಗಿ. ಮುಹೂರ್ತದ ವೇಳೆ ಸರಿಯಾಗಿ ಅರ್ಧರಾತ್ರಿಯಲ್ಲಿದೆ!" ಎಂದನು.



ವಿನಯಸೇನ ಮಹಾರಾಜನು ಗಾಬರಿಬಿದ್ದು "ಏನಿದು? ನನ್ನ ಕುಮಾರನು ನಗರದೊಳಗೆ ವಿಲಾಸ ಜೀವನದಲ್ಲಿ ಸಮಯ ಕಳೆಯುವನೆಂದು ಗೊತ್ತಾಗಿ, ನಾನೇ ಬೇಟೆಗೆ ಪ್ರೋತ್ಸಾಹಪಡಿಸಿ ನಾಲ್ಕು ದಿನಗಳ ಹಿಂದೆ ಕಾಡಿಗೆ ಕಳುಹಿಸಿದೆನು. ನೀವು ಹೇಳುವುದು ನಿಜವಾದರೆ ಈ ವಿವಾಹವು ನಡೆಯದಂತೆ ನಿಲ್ಲಿಸಲೇ ಬೇಕಾಗಿದೆ." ಎಂದನು.

"ತತ್‌ಕ್ಷಣವೇ ಅದಕ್ಕೆ ಪ್ರಯತ್ನಿಸಿರಿ ಪ್ರಭೂ" ಎಂದನು ರಾಮಶಾಸ್ತ್ರಿ.

ರಾಜನು ಆಗಿಂದಾಗಲೇ ಎದ್ದು ಅರಣ್ಯದ ಕಡೆಗೆ ಹೊರಟನು. ಆತನ ಪ್ರಯಾಣದಲ್ಲಿ ದೊಡ್ಡ ದೊಡ್ಡ ಆತಂಕಗಳು ಇದಿರಾದುವು. ದಾರಿಯಲ್ಲಿ ಒಂದು ಕಡೆ ಡಕಾಯಿತರ ಗುಂಪನ್ನು ಇದಿರಿಸಿ ಕಾದಾಡ ಬೇಕಾಯಿತು. ಅವರನ್ನು ಓಡಿಸಿ ಮುಂದೆ ಹೋಗುವಾಗ ಕುದುರೆಗೆ ಪೆಟ್ಟಾಗಿ ಬಿದ್ದುಹೋಯಿತು. ಈ ಕಾರಣಗಳಿಂದ ರಾಜನು ಅರ್ಧರಾತ್ರಿ ದಾಟಿದ ಮೇಲೆಯೇ ಯುವರಾಜನ ಬಳಿಗೆ ಹೋಗಿ ಸೇರಲು ಸಾಧ್ಯವಾಯಿತು. ಆಗಲೇ ಬೇಡರ ಯುವತಿಯೊಂದಿಗೆ ಯುವರಾಜನ ಮದುವೆ ಆಗಿಹೋಗಿತ್ತು.

ವಿನಯಸೇನನ ರಾಜವಂಶವು ವಿವಾಹವೆಂಬ ಸಂಸ್ಕಾರವನ್ನು ಪ್ರಾಮುಖ್ಯವಾಗಿ ಗೌರವಿಸುತ್ತಿತ್ತು. ಈಗ ಮಗನ ವಿವಾಹವು ಆಗಿಹೋದುದರಿಂದ ವಿನಯಸೇನನಿಗೆ ಆ ಬೇಡರ ಹುಡುಗಿಯನ್ನು ಸೊಸೆಯಾಗಿ, ಭಾವೀ ರಾಣಿಯಾಗಿ ಒಪ್ಪಿಕೊಳ್ಳದೆ ಬೇರೆ ದಾರಿ ಇರಲಿಲ್ಲ.

ತಂದೆಗೆ ಇಷ್ಟವಿಲ್ಲದ ಈ ವಿವಾಹವು, ಮುಂದಾಗಿ ತಂದೆಗೆ ಹೇಗೆ ಗೊತ್ತಾಯಿತೆಂದು ಸೂರ್ಯಸೇನನು ಆಶ್ಚರ್ಯಪಟ್ಟನು. ಸೇವಕರು ಅವನಿಗೆ ರಾಮಶಾಸ್ತ್ರಿಯ ಸಮಾಚಾರವನ್ನು ಕುರಿತು ಹೇಳಿದರು.

ಸೂರ್ಯಸೇನನು ರಾಜಧಾನಿಯನ್ನು ಸೇರಿದ ಕೂಡಲೇ, ರಾಮಶಾಸ್ತ್ರಿಯ ಬಳಿಗೆ ಹೋಗಿ, "ಓ ಜ್ಯೋತಿಷ್ಯ ಪಂಡಿತರೇ, ನಿಮ್ಮ ಪ್ರತಿಭೆಯನ್ನು ಕುರಿತು ಕೇಳಿದೆನು. ಆದರೆ ನನ್ನ ಮೇಲೆ ಈಗಲೇ ರಾಜ್ಯಭಾರದ ಹೊರೆ ಬೀಳದಂತೆ ನೋಡಬೇಕಾದ ಬಾಧ್ಯತೆ ನಿಮ್ಮದು. ಇದಕ್ಕೆ ಪ್ರತಿಫಲವಾಗಿ ನಿಮಗೆ ಪುಷ್ಕಳವಾಗಿ ಧನ ಕೊಡುತ್ತೇನೆ." ಎಂದನು.

ರಾಮಶಾಸ್ತ್ರಿ ಅದಕ್ಕೇನೂ ಹೇಳದೆ ಮೌನವಾಗಿ ಇದ್ದುಬಿಟ್ಟನು. ಯುವರಾಜನು ಮತ್ತೊಮ್ಮೆ ಹೇಳಿದರೂ ಮೌನವೇ ರಾಮಶಾಸ್ತ್ರಿಯ ಉತ್ತರವಾಯಿತು.

ವಿನಯಸೇನರಾಜನು ರಾಮಶಾಸ್ತ್ರಿಯನ್ನು ತನ್ನ ಬಳಿಗೆ ಕರೆಯಿಸಿ ದಿಗಿಲಿನಿಂದ, "ನೀವು ಹೇಳಿದಂತೆಯೇ ಆಗಿಹೋಯಿತು. ನನ್ನ ಮಗನು ನಮ್ಮ ವಂಶಾಚಾರವನ್ನು ಪೂರ್ತಿ ಮಣ್ಣುಗೂಡಿಸಿದನು. ಇನ್ನು ಮುಂದೆ ನಮ್ಮ ರಾಜವಂಶದ ಚರಿತ್ರೆ ಎಷ್ಟು ಹಾಸ್ಯಾಸ್ಪದವಾಗುವುದೋ ಎಂದು ಭಯವಾಗಿದೆ. ಮುಂದೇನಾದೀತೆಂದು ಹೇಳಬಲ್ಲಿರಾ ?" ಎಂದನು.

"ತಾವೇನೂ ಚಿಂತಿಸಬೇಡಿ ಮಹಾಪ್ರಭೂ. ನಿಮ್ಮ ಸೊಸೆ ಬಲು ಬೇಗದಲ್ಲೇ ನಿಮ್ಮ ವಂಶದ ರಾಜ ಮರ್ಯಾದೆಗಳನ್ನೆಲ್ಲಾ ಕಲಿತುಕೊಂಡು ಒಳ್ಳೆಯ ಸಂಸ್ಕಾರವಂತಳಾಗುತ್ತಾಳೆ. ಅವಳ ಕಾರಣದಿಂದ ನಿಮ್ಮ ಚಿರಂಜೀವನು ನಿಮ್ಮ ವಂಶಕ್ಕೆ ದೊಡ್ಡ ಕೀರ್ತಿಯನ್ನು ತರುವವನಾಗುತ್ತಾನೆ. ನೀವು ಕೂಡಲೇ ಅವನಿಗೆ ಪಟ್ಟಾಭಿಷೇಕಮಾಡಿ, ಸ್ವಲ್ಪ ದಿನ ಪರಿಪಾಲನೆಯ ವಿಷಯದಲ್ಲಿ ಅವನಿಗೆ ಶಿಕ್ಷಣ ಕೊಡುತ್ತಾ ಇರುವುದು ಒಳ್ಳೆಯದು" ಎಂದನು ರಾಮಶಾಸ್ತ್ರಿ.

ಸೊಸೆಯಾಗಿ ಬಂದ ಬೇಡರ ಹುಡುಗಿ ತಮ್ಮ ಆಚಾರ ವ್ಯವಹಾರಗಳನ್ನು ಕಲಿಯುವವರೆಗೂ ಮಗನಿಗೆ ಪಟ್ಟಾಭಿಷೇಕ ಮಾಡಲು 'ರಾಜನಿಗೆ ಇಷ್ಟವಿರಲಿಲ್ಲ. ತನ್ನ ಈ ಮನೋಗತವನ್ನು ರಾಮಶಾಸ್ತ್ರಿಯೊಂದಿಗೆ ಹೇಳಿ ನೋಡಿದನು. ಹಾಗೆ ತಡಮಾಡುವುದು ಒಳ್ಳೆಯದಲ್ಲವೆಂದೂ, ತಾನು ಹೇಳಿದಂತೆ ಮಾಡಿದರೇನೇ ಒಳಿತಾಗುವುದೆಂದೂ ರಾಮಶಾಸ್ತ್ರಿ ಹೇಳಿದನು. ಈ ವಿಷಯವಾಗಿ ಇಬ್ಬರ ನಡುವೆ ಸ್ವಲ್ಪ ಹೊತ್ತು ವಾದ ವಿವಾದ ನಡೆಯಿತು. ಕಡೆಗೆ ರಾಜನು ರಾಮಶಾಸ್ತ್ರಿ ಹೇಳಿದ ಹಾಗೆಯೇ ಮಾಡಲು ನಿಶ್ಚಯಿಸಿದನು. ರಾಮಶಾಸ್ತ್ರಿ ನಿರ್ಣಯಿಸಿ ಕೊಟ್ಟ ಮುಹೂರ್ತ ದಿನದಲ್ಲಿ ಸೂರ್ಯಸೇನನಿಗೆ ಪಟ್ಟಾಭಿಷೇಕವಾಯಿತು. ಅವನು ಸಿಂಹಾಸನವೇರಿ ರಾಜನಾದನು.

ಹೀಗಾದ ಕೂಡಲೇ ಸೂರ್ಯಸೇನನು ರಾಮಶಾಸ್ತ್ರಿಯನ್ನು ತನ್ನ ಬಳಿಗೆ ಕರೆಯಿಸಿ, "ಏನಯ್ಯಾ ಇದು ಹೀಗಾಯಿತು ? ಮದುವೆಯಾದ ಕೂಡಲೇ ಸ್ವಲ್ಪಕಾಲ ನಾನು ವಿನೋದ ಯಾತ್ರೆ ಮಾಡಿ ಕಾಲ ಕಳೆಯಬೇಕೆಂದಿದ್ದೆ, ನಿಮ್ಮಿಂದಾಗಿ ನನಗೆ ಅಂತಹ ಅವಕಾಶ ಹೋಯಿತು. ಇದಕ್ಕೆ ನೀವು ಏನು ಸಮಾಧಾನ ಹೇಳುವಿರಿ ?" ಎಂದು ಕೇಳಿದನು.

"ನಿಮ್ಮ ತಂದೆಗೆ ಇನ್ನು ಒಂದು ವರ್ಷದಲ್ಲಿ ಆಯುಷ್ಯ ತೀರುತ್ತದೆ. ಸಿಂಹಾಸನವೇರಿದ ಮೇಲೆ ಸ್ವಲ್ಪ ಕಾಲವಾದರೂ ನಿಮಗೆ ಅವರ ಸಲಹೆಗಳು



ಲಭಿಸುತ್ತವೆಂದು ಹಾಗೆ ಮಾಡಿದೆ. ಎಲ್ಲಾ ನಿಮ್ಮ ಒಳಿತಿಗಾಗಿಯೇ " ಎಂದನು ರಾಮಶಾಸ್ತ್ರಿ.

" ಹಾಗೇನು? ಎಲ್ಲವೂ ನೀವು ಹೇಳಿದ ಹಾಗೆಯೇ ನಡೆಯುತ್ತದೆನ್ನಲು ನೀವು ಭಗವಂತನೇನು? ನಿಮ್ಮ ಮೂರ್ಖತನದಿಂದಾಗಿ ನನ್ನ ಸಂತೋಷವು ಮಣ್ಣು ಪಾಲಾಯಿತು. ನಿಮಗೂ ಅದೇ ಗತಿ ಹಿಡಿಸುತ್ತೇನೆ " ಎಂದು ಸೂರ್ಯಸೇನನು ರಾಮಶಾಸ್ತ್ರಿಯನ್ನು ಕಾರಾಗೃಹಕ್ಕೆ ಕಳುಹಿಸಿಬಿಟ್ಟನು.

ಹೀಗೆ ಮಾಡಿದುದು ಸರಿಯಲ್ಲವೆಂದು ತಂದೆ ವಿನಯಶೀಲನು ಮಗನಿಗೆ ಎಷ್ಟು ಹೇಳಿದರೂ ಅವನು ಕೇಳಲಿಲ್ಲ. ಆಗ ವಿನಯಶೀಲನು ಕಾರಾಗೃಹಕ್ಕೆ ಹೋಗಿ ರಾಮಶಾಸ್ತ್ರಿಯನ್ನು ನೋಡಿ, " ನಾನು ಮನಸ್ಸು ಮಾಡಿದರೆ ನಿಮ್ಮನ್ನು ಈ ಶಿಕ್ಷೆಯಿಂದ ಪಾರು ಮಾಡಬಲ್ಲೆನು. ಆದರೆ ಮಗನು ನನ್ನ ಮೇಲೆ ಸಿಟ್ಟಾಗುತ್ತಾನೆ. ಅದು ಅಷ್ಟು ದೊಡ್ಡ ವಿಷಯ ವಲ್ಲವೆನ್ನುವಿರಾ ? ಏನು ನಿಮ್ಮ ಅಭಿಪ್ರಾಯ? " ಎಂದು ಕೇಳಿದನು.

" ಪ್ರಭೂ! ನಿಮ್ಮಿಬ್ಬರೊಳಗೆ ಮನಸ್ತಾಪ ಬರುವುದು ಎಷ್ಟು ಮಾತ್ರಕ್ಕೂ ಒಳ್ಳೆಯದಲ್ಲ. ಈ ಸಮಯದಲ್ಲಿ ನನಗೆ ಕಾರಾಗಾರದ ಯೋಗವೂ ಇದೆ. ರಾಜಾಶ್ರಯದಿಂದ ಈ ಪೀಡೆ ಪರಿಹಾರವಾಗ ಬಹುದೆಂದುಕೊಂಡು ನಾನು ನಿಮ್ಮ ಕರೆಯನ್ನು ಕೇಳಿ ಬಂದೆನು. ಬರುವುದನ್ನು ತಪ್ಪಿಸಲು ಸಾಧ್ಯವಿಲ್ಲ ವೆಂದೇ ಆಯಿತು. ನನ್ನನ್ನು ಕುರಿತು ನೀವು ಚಿಂತಿಸ ಬೇಡಿ. ಪ್ರಭುಗಳೇ, ನಿಮಗೆ ಬೇಗದಲ್ಲೇ ಮೃತ್ಯು ಗಂಡ ಬರಲಿದೆ, ಆ ವಿಷಯದಲ್ಲಿ ತಕ್ಕ ಜಾಗ್ರತೆ ತೆಗೆದುಕೊಂಡಿರಿ. ಇರುವುದನ್ನು ಮರೆಮಾಜದೆ ಹೇಳುವುದನ್ನು ಕ್ಷಮಿಸಬೇಕು" ಎಂದನು ರಾಮಶಾಸ್ತ್ರಿ.

ವಿನಯಸೇನನು ತನ್ನ ಕುಮಾರನ ಬಳಿಗೆ ಹೋಗಿ, " ಅಪ್ಪಾ, ನೀನು ನಡೆಯುವ ರೀತಿ ನನಗೇನೂ ಹಿಡಿಸಲಿಲ್ಲ, ರಾಮಶಾಸ್ತ್ರಿ ದೊಡ್ಡ ಪಂಡಿತರು. ಅವರು ನಿನ್ನ ವಿವಾಹವನ್ನು ಕುರಿತು ಹೇಳಿದು ದರಿಂದ ತಾನೇ, ಅದನ್ನು ನಿಲ್ಲಿಸಬೇಕೆಂದು ನಾನು ಪ್ರಯತ್ನಿಸಿದ್ದು ? ನಿನ್ನ ಹೆಂಡತಿಯಿಂದಾಗಿ ನಮ್ಮ





ವಂಶಕ್ಕೆ ಒಳ್ಳೆಯ ಹೆಸರು ಬರುತ್ತದೆಂದೂ ರಾಮ ಶಾಸ್ತ್ರಿ ಹೇಳಿದ್ದಾರೆ. ಆದುದರಿಂದಲೇ ನನ್ನ ಸೊಸೆಯ ಮೇಲೆ ನನಗೆ ಅಭಿಮಾನ ಉಂಟಾಗಿದೆ. ಈಗ ನನಗೆ ಮೃತ್ಯುಗಂಡ ಇರುವುದೆಂದು ಹೇಳಿದ್ದಾರೆ. ಅದಕ್ಕಾಗಿಯೇ ನಿನಗೆ ಪಟ್ಟಾಭಿಷೇಕ ಮಾಡಿ ಸಿದ್ದೆಂತಲೂ ಹೇಳಿದರು. ಜ್ಯೋತಿಶ್ಶಾಸ್ತ್ರವನ್ನೇ ನಂಬಿಕೊಂಡಿರುವುದರ ಹೊರತು ಬೇರೆ ಯಾವ ತಪ್ಪನ್ನೂ ಅವರು ಮಾಡಿಲ್ಲ." ಎಂದನು.

ತಂದೆಯ ಮಾತುಗಳನ್ನು ಕೇಳಿ ಸೂರ್ಯಸೇನನು ಬೇಸರದಿಂದ, "ಅಪ್ಪಾ, ನಾನು ಜ್ಯೋತಿಷ್ಯವನ್ನು ಹಾಗೆಲ್ಲಾ ನಂಬುವವನಲ್ಲ. ಅವರ ದೊಡ್ಡತನವು ರುಜುವಾದರೆ ತಪ್ಪದೆ ಅವರನ್ನು ಬಿಡುಗಡೆ ಮಾಡು ತ್ತೇನೆ. ರುಜುವಾಗದೇ ಹೋದರೆ ಅವರು ಕಡೆ ತನಕ ಕಾರಾಗೃಹದಲ್ಲೇ ಇರಬೇಕಾಗುತ್ತದೆ." ಎಂದು ಹೇಳಿ, ತಂದೆಗೆ ಇರುವ ಮೃತ್ಯುಗಂಡ ತಪ್ಪಲು, ಪ್ರತ್ಯೇಕ ಏರ್ಪಾಡುಗಳನ್ನು ಆಗಲೇ ಪ್ರಾರಂಭಿಸಿದನು.

ಕೆಲವು ದಿನಗಳಲ್ಲಿ ರಾಮಶಾಸ್ತ್ರಿ ಹೇಳಿದ ಮೃತ್ಯು ಗಂಡದ ದಿನವು ಬಂದೇ ಬಂದಿತು. ಆ ದಿನ ವಿನಯ ಸೇನನು ಕೋಣೆಯಿಂದ ಕದಲದಂತೆ, ಅವನಿಗೆ ಬೇಕಾದುದನ್ನೆಲ್ಲಾ ಒದಗಿಸಲ್ಪಟ್ಟುವು. ರಾಜನ ಸುತ್ತಲೂ ಘನ ವೈದ್ಯರು ಅದ್ಭುತವಾದ ಮೂಲಿಕೆ ಗಳೊಂದಿಗೆ ಆಸೀನರಾಗಿದ್ದರು. ಯಾವ ರೂಪದಲ್ಲಿ ಮೃತ್ಯು ಬರುತ್ತದೋ ಎಂದುಕೊಂಡು ತಂದೆ ಮಗಂದಿರಿಬ್ಬರೂ ಸಾವಿರ ಕಣ್ಣುಗಳಿಂದ ನೋಡಿ ಕೊಂಡಿದ್ದರು. ಸಾವಿನ ರಹಸ್ಯ ಮಾತ್ರ ರಾಮಶಾಸ್ತ್ರಿ ಮತ್ತು ತಂದೆ ಮಗ ಈ ಮೂವರ ಹೊರತು ಬೇರೆ ಯಾರಿಗೂ ತಿಳಿಯದು.

ಸರಿಯಾಗಿ ರಾಮಶಾಸ್ತ್ರಿ ಹೇಳಿದ ಕ್ಷಣದಲ್ಲಿ ವಿನಯಸೇನ ರಾಜನು, ಹಾ ಎಂದು ಕೆಟ್ಟದಾಗಿ ಕೂಗಿ ತಲೆ ಜೋಲಿ ಬಿದ್ದನು. ವೈದ್ಯರು ಪರೀಕ್ಷಿಸಿ, ಹೃದಯ ಮಿಡಿತ ನಿಂತುಹೋದುದರಿಂದ ಪ್ರಾಣ ಹೋಯಿತೆಂದು ನಿರ್ಣಯಿಸಿದರು. ನಿಜಕ್ಕೂ ನಡೆದುದೇನೆಂದರೆ, ರಾಜನು ಒರಗಿಕೊಂಡಿದ್ದ ಮಂಚದ ಮೇಲ್ಭಾಗದಲ್ಲಿ ನೇತಾಡುತ್ತಿದ್ದ ದೀಪ ಗುಚ್ಛದ ಮೇಲೆ ಹೇಗೋ ದೊಡ್ಡದೊಂದು ಹಲ್ಲಿ ಸೇರಿ ಕೊಂಡಿತ್ತು. ಅದು ಇನ್ನೊಂದು ಗುಚ್ಛದ ಮೇಲೆ ಹಾರುವಾಗ ಜಾರಿ ಮಂಚದ ಮೇಲೆ ಬಿತ್ತು. ಮೃತ್ಯುಭಯದಲ್ಲಿದ್ದ ವಿನಯಸೇನನಿಗೆ ತನ್ನ ಮೇಲೆ ಮೃತ್ಯುವೇ ಲಂಘಿಸಿದಂತೆ ತೋರಿ ಕೂಗಿದನು. ಎದೆ ನಿಂತುಹೋಯಿತು.

ಈ ಸಂಘಟನೆಯನ್ನು ನೋಡಿ ಸೂರ್ಯಸೇನನು ಅತ್ಯಾಶ್ಚರ್ಯಪಟ್ಟನು. ಕೂಡಲೇ ಅವನು ರಾಮ ಶಾಸ್ತ್ರಿಯ ಬಳಿಗೆ ಹೋಗಿ, "ಅಯ್ಯಾ, ನಾನು ನಿಮ್ಮ ಪ್ರತಿಭೆಯನ್ನು ಅರ್ಥಮಾಡಿಕೊಳ್ಳದೆ ಹೋದೆನು. ನನ್ನನ್ನು ಕ್ಷಮಿಸಬೇಕು. ನಿಮ್ಮ ಜ್ಯೋತಿಷ್ಯದ ಪಾಂಡಿತ್ಯವನ್ನು ನನ್ನ ಪರಿಪಾಲನೆಯ ನಿರ್ವಹಣೆಗೆ ಸಹಾಯಪಡಿಸಬೇಕು" ಎಂದನು.

ರಾಮಶಾಸ್ತ್ರಿ ಮುಗುಳು ನಗು ಸೂಸಿ, "ಮಹಾರಾಜಾ, ಜ್ಯೋತಿಶ್ಶಾಸ್ತ್ರದ ಬಗೆಗೆ ನಿಮಗೆ ಅಭಿಮಾನ ಉಂಟಾದುದಕ್ಕೆ ಸಂತೋಷಪಡುತ್ತೇನೆ. ಆದರೆ ಜ್ಯೋತಿಷ ಪಾಂಡಿತ್ಯದಿಂದ ನಿಮಗೆ ರಾಜ್ಯಪಾಲನೆಯ ವ್ಯವಹಾರದಲ್ಲಿ ಸಹಾಯಮಾಡಬಲ್ಲ ಶಕ್ತಿ ನನಗಿಲ್ಲ. ಕ್ಷಮಿಸಬೇಕು." ಎಂದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ರಾಮಶಾಸ್ತ್ರಿಯನ್ನು ಕುರಿತು ನನಗೆ ಮುಖ್ಯವಾದೊಂದು ಸಂದೇಹವಿದೆ. ಅವನು ರಾಜನ ಆದರಣೆಯನ್ನು ತಿರಸ್ಕರಿಸಿದ್ದು ಸರಿಯಲ್ಲವೆಂದೇ ನನಗೆ ತೋರುತ್ತದೆ. ಮೊದಲು ಜ್ಯೋತಿಷ್ಯವನ್ನು ಸ್ವಲ್ಪವೂ ನಂಬದಿದ್ದ ರಾಜಾ ಸೂರ್ಯಸೇನನು ಕಡೆಗೆ ಅದರ ಮೇಲೆ ಬಹಳ ಗೌರವ ತೋರಿಸಿದ್ದಾನೆ. ತಾನು ಕಾರಾಗೃಹದಲ್ಲಿ ಕೂಡಿಸಿದ ವ್ಯಕ್ತಿಯನ್ನೇ, ತನಗೆ ರಾಜ್ಯಪಾಲನೆಯಲ್ಲಿ ಸಹಾಯ ಮಾಡಬೇಕೆಂದು ಕೇಳಿಕೊಂಡಿದ್ದಾನೆ. ಹಾಗಿರುವಾಗ ತಾನೊಬ್ಬ ಜ್ಯೋತಿಷ ಪಂಡಿತನಾಗಿ, ರಾಜನಿಗೆ ಸಹಾಯಮಾಡಲು ಶಕ್ತನಾಗಲಾರೆನೆಂದು ಅವನು ಹೇಳಿದುದು ಸುಳ್ಳಲ್ಲವೆ ? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದಿದ್ದೂ ಹೇಳದಿದ್ದರೆ ನಿನ್ನ ತಲೆ ಸಾವಿರ ಚೂರುಗಳಾಗಿ ಹಾರುತ್ತದೆ!" ಎಂದಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು : "ರಾಮಶಾಸ್ತ್ರಿ ತಾನು ಅಭ್ಯಾಸ ಮಾಡಿಕೊಂಡ ಜ್ಯೋತಿಷ್ಯದಲ್ಲಿ ಮಹಾ ಪಂಡಿತನು ಮಾತ್ರವಲ್ಲದೆ ಒಳ್ಳೆಯ ಪ್ರಾಮಾಣಿಕನಾಗಿಯೂ ಇರುವವನು. ರಾಜನಿಗೆ ತನ್ನ ಪಾಂಡಿತ್ಯದ ಮೂಲಕ ಸಹಾಯಪಡಲಾರೆನೆಂದು ಅವನು ಹೇಳಿದುದರಲ್ಲಿ ಸುಳ್ಳೇನೂ ಇಲ್ಲ. ಬೇಡರ ಹುಡುಗಿಯೊಂದಿಗೆ ಯುವರಾಜನಿಗೆ ವಿವಾಹ ನಡೆಯಲಿದೆಯೆಂದು ಮುಂದಾಗಿ ಹೇಳಿದರೂ ವೃದ್ಧ ರಾಜನಿಂದ ಅದನ್ನು ನಿಲ್ಲಿಸಲಾಗಲಿಲ್ಲ. ಮೃತ್ಯುಗಂಡದ ವಿಷಯದಲ್ಲಿ ಕೂಡಾ ಹಾಗೆಯೇ ನಡೆಯಿತು. ಮುಂದಾಗಿ ತಿಳಿದಿದ್ದರೂ ರಾಮಶಾಸ್ತ್ರಿಗೆ ತನ್ನ ಕಾರಾಗೃಹ ವಾಸವನ್ನು ಕೂಡಾ ತಪ್ಪಿಸಿಕೊಳ್ಳಲಾಗಲಿಲ್ಲ. ಈ ಕಾರಣಗಳಿಂದ ನಡೆಯಬೇಕಾದುದನ್ನು ಮುಂದಾಗಿ ತಿಳಿದಿದ್ದೂ ತಪ್ಪಿಸಲಾಗದೆ ಹೋಗುವಾಗ, ಜ್ಯೋತಿಷ್ಯದಿಂದ ರಾಜಕಾರ್ಯಗಳಿಗೆ ಏನು ಸಹಾಯವಾದೀತು ? ರಾಜಾಸ್ಥಾನದ ಹಣವನ್ನು ವ್ಯರ್ಥವಾಗಿ ತಾನು ಉಪಯೋಗಿಸಿಕೊಂಡಂತೆಯೇ ಆಗುತ್ತದೆ. ಈ ಬಗೆಯ ಜಿಜ್ಞಾಸೆಯಿಂದಲೇ ರಾಮಶಾಸ್ತ್ರಿ ರಾಜನ ಆದರಣೆಯನ್ನು ತಿರಸ್ಕರಿಸಿದ್ದಾನೆ"

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡಿತು.



# ಚಮತ್ಕಾರದ ಪ್ರಶ್ನೆ

ನೀಲಕಂಠ ದೀಕ್ಷಿತರು ಬಹು ದೊಡ್ಡ ಪಂಡಿತರು. ಅವರ ಪಾಂಡಿತ್ಯಕ್ಕೆ ಮೆಚ್ಚಿದ ಮಹಾರಾಜರು ಅವರ ತೋಳುಗಳಿಗೆ ಸಿಂಹ ಕಚ್ಚಳಿಗಳನ್ನು ತೊಡಿಸಿದ್ದರು.

ಒಂದು ದಿನ ಅವರು ಪಂಡಿತರ ಸಭೆಗೆ ಹೋಗಿ ಬಿಸಿಲಿನಲ್ಲಿ ಮನೆಗೆ ಬಂದು, ಅವಸರದಿಂದ ಸ್ನಾನಕ್ಕೆ ಹೋಗುವಾಗ ಸಿಂಹ ಕಚ್ಚಳಿಗಳನ್ನು ಅಲ್ಲಿದ್ದ ಮೇಜಿಯ ಮೇಲೆ ಇಟ್ಟರು.

ದೀಕ್ಷಿತರು ಸ್ನಾನ ಮುಗಿಸಿ ಹಿಂದಿರುಗಿ ಬಂದು ನೋಡಿದಾಗ, ಸಿಂಹ ಕಚ್ಚಳಿಗಳಲ್ಲಿ ಒಂದು ಕಾಣಿಸಲಿಲ್ಲ. ಮನೆಯವರನ್ನು ವಿಚಾರಿಸಿದಾಗ ಅವರ ದೂರದ ಬಂಧುವಾದ ರಂಗಾಶಾಸ್ತ್ರಿ ಬಂದು ಹೋದನೆಂದು ಗೊತ್ತಾಯಿತು. ಅವನು ಸ್ವಲ್ಪ ಕೈ ತುರಿಕೆಯವನೆಂದು ಗೊತ್ತು. ಈ ಕಳ್ಳತನವು ಅವನದೇ ಎಂದು ದೀಕ್ಷಿತರಿಗೆ ತೋರಿತು.

ಕೂಡಲೇ ಅವರು ಮನೆಯಿಂದ ಹೊರಟು ರಂಗಾಶಾಸ್ತ್ರಿಯ ಗ್ರಾಮಕ್ಕೆ ಹೋಗಿ, ಅವನ ಮನೆಗೆ ಹೋದರು. ಮನೆಯಲ್ಲಿ ರಂಗಾಶಾಸ್ತ್ರಿಯನ್ನು ನೋಡಿದ ಕೂಡಲೇ ಆಶ್ಚರ್ಯ ನಟಿಸುತ್ತ, "ಏನಿದು ರಂಗಾ, ಎರಡು ಸಿಂಹ ಕಚ್ಚಳಿಗಳನ್ನೂ ತಂದುಬಿಡೋದೇನಾ ? ಮಹಾರಾಜರು ನನಗೆ ಪ್ರೀತಿಯಿಂದ ಕೊಟ್ಟದ್ದಾಯಿತಲ್ಲಾ. ಒಂದನ್ನಾದರೂ ನನಗೆ ಬಿಟ್ಟು ಬರಬೇಡಿತ್ತೇ ?" ಎಂದರು.

ರಂಗಾಶಾಸ್ತ್ರಿ ಗಾಬರಿಯಾಗಿ. "ಇದೆಂಥ ಸುಳ್ಳು ! ಎರಡು ಸಿಂಹ ಕಚ್ಚಳಿ ನಾನು ತಂದೆನೆ ? ನಾನು ತಂದದ್ದು ಇಲ್ಲೇ ಇದೆ. ಒಂದೇ ಒಂದು" ಎಂದು ಸಿಂಹ ಕಚ್ಚಳಿಯನ್ನು ದೀಕ್ಷಿತರಿಗೆ ಕೊಟ್ಟನು.

ತನ್ನ ಯುಕ್ತಿ ಫಲಿಸಿದುದಕ್ಕೆ ದೀಕ್ಷಿತರು ಸಂತೋಷಿಸುತ್ತ, "ನಿನ್ನ ನೀತಿವಂತಿಕೆ ನನಗೆ ಗೊತ್ತಿಲ್ಲವೇನು ? ಎರಡನೇದನ್ನು ಆ ಕಳ್ಳ ಕೊರಮನೇ ಕದ್ದಿದ್ದಾನೆ. ಅವನನ್ನು ಸುಮ್ಮನೇ ಬಿಡುವೆನೇನು ?" ಎನ್ನುತ್ತಾ ತನ್ನ ಮನೆಗೆ ಹಿಂದಿರುಗಿದರು.





# ಪ್ರಧಾನ ಸಲಹಾದಾರ

ಅನೇಕ ವರ್ಷಗಳ ಹಿಂದೆ ಮುಕುಂದ ನಗರವನ್ನು ಪ್ರಸೇನ ವರ್ಮನು ಆಳಿಕೊಂಡಿದ್ದನು. ಆ ರಾಜನ ಪ್ರಧಾನ ಸಲಹಾದಾರನಾಗಿದ್ದ ಶಿವನಾಥನು ಆಕಸ್ಮಾತ್ತಾಗಿ ತೀರಿಹೋದುದರಿಂದ ರಾಜನಿಗೆ ಬಹಳ ಚಿಂತೆಯಾಯಿತು. ರಾಜ್ಯ ಪರಿಪಾಲನೆಯ ವಿಷಯದಲ್ಲಿ ರಾಜನಿಗೆ ಮುಖ್ಯ ಮಂತ್ರಾಲೋಚಕನಾಗಿದ್ದವನು ಶಿವನಾಥ. ಅವನ ಸಲಹೆಗಳು ಅತ್ಯುತ್ತಮವಾಗಿದ್ದುವು. ಮತ್ತೆ ಅಂತಹ ಮೇಧಾವಿಯಾದವನು ತನಗೆ ದೊರಕಲಾರನೆಂದು ರಾಜನು ದೊಡ್ಡ ವಿಚಾರದಲ್ಲಿ ಬಿದ್ದನು.

ಪ್ರಸೇನವರ್ಮನಿಗೆ ಮೂವರು ಉಪಮಂತ್ರಿಗಳಿದ್ದರು. ಅವರು ಮೂವರೂ ಶಿವನಾಥನಿಗೆ ಸಮಾನರಾಗಿ ಬರುವವರಲ್ಲದಿದ್ದರೂ, ಕೆಲವು ಕ್ಲಿಷ್ಟಪರಿಸ್ಥಿತಿಯಲ್ಲಿ ಅವರು ಒಳ್ಳೊಳ್ಳೆಯ ಸಲಹೆಗಳನ್ನು ಕೊಟ್ಟವರೇ. ಅವರಲ್ಲಿ ಸಮರ್ಥನಾದವನನ್ನು ಆರಿಸಿ ಪ್ರಧಾನ ಸಲಹಾದಾರನಾಗಿ ಆರಿಸಿಕೊಳ್ಳಬೇಕೆಂದು ರಾಜನು ನಿಶ್ಚಯಿಸಿದನು.

ತಾನೇ ಸ್ವತಃ ಅವರನ್ನು ಪರೀಕ್ಷಿಸಬೇಕೆಂದು, ಮೊದಲು ವಿಶಾಖನೆಂಬ ಉಪಮಂತ್ರಿಯನ್ನು ತನ್ನ ಬಳಿಗೆ ಕರೆಸಿಕೊಂಡನು. ಪ್ರಧಾನ ಸಲಹಾದಾರನು ಸತ್ತಕೂಡಲೇ ಅನುಭವಶಾಲಿಯಾದ ತನಗೇ ಆ ಪದವಿ ದಕ್ಕುವುದೆಂದು ಅವನು ಅಂದುಕೊಂಡಿದ್ದನು.

ಅದಕ್ಕೆ ತಕ್ಕ ಹಾಗೆಯೇ ಪ್ರಸೇನನು ಅವನೊಂದಿಗೆ, “ನಿಮ್ಮನ್ನು ಪ್ರಧಾನ ಸಲಹಾದಾರರನ್ನಾಗಿ ನಿಯಮಿಸಬೇಕೆಂದಿದ್ದೇನೆ,” ಎಂದು ಹೇಳಿ, ಪ್ರಸ್ತುತ ರಾಜ್ಯದ ಮೇಲೆ ಬರಲಿರುವ ಕೆಲವಾರು ಸಮಸ್ಯೆಗಳನ್ನು ಹೇಳಿದನು. ಆಮೇಲೆ ಮೊದಲು ಗಮನಿಸಬೇಕಾದ ವಿಷಯವನ್ನು ಹೇಳಲು ತೊಡಗಿ, “ಈಗ ನಮ್ಮ ನೆರೆಯ ರಾಜನಾದ ಸುಕೇತು ನಮ್ಮ ಮೇಲೆ ದಂಡಯಾತ್ರೆಗೆ ಹೊರಡುವ ಸನ್ನಾಹದಲ್ಲಿರುವನೆಂದು ಗೂಢಚಾರರು ಸುದ್ದಿ ತಂದಿದ್ದಾರೆ. ಅವನು ಸೈನಿಕ ಬಲದಲ್ಲಿಯೂ ಆರ್ಥಿಕ ಬಲದಲ್ಲಿಯೂ ನಮಗಿಂತಲೂ ಹೆಚ್ಚಿನವನು. ಅವನ ದಾಳಿಯನ್ನು ಇದಿರಿಸಲು ನಾವು ಈಗ ಏನು ಮಾಡಬೇಕೆಂದು ನಿಮಗೆ ತೋರುತ್ತದೆ ?” ಎಂದು ಪ್ರಶ್ನಿಸಿದನು.

ವಿಶಾಖನು ಒಂದು ನಿಮಿಷ ಆಲೋಚಿಸಿ, “ನಮಗಿಂತ ಹೆಚ್ಚಿನ ಬಲವಂತರೊಂದಿಗೆ ವಿರೋಧವೇತಕ್ಕೆ ಪ್ರಭೂ ? ವಿರೋಧವನ್ನು ಬೆಳೆಸಿಕೊಳ್ಳುವು

ಬಿ. ಎ. ರಾವ್



ದರಿಂದ ತೊಂದರೆಗಳೇ ಹೆಚ್ಚು. ಏನೋ ಒಂದು ಸಂಧಿಮಾಡಿಕೊಂಡರೆ ಜನನಷ್ಟ ಧನನಷ್ಟಗಳಿಲ್ಲದೆ ಸಮಸ್ಯೆ ಪರಿಹಾರವಾಗುತ್ತದೆ. ಆಮೇಲೆ ನಮ್ಮ ಬಲವನ್ನು ಹೆಚ್ಚಿಸಿಕೊಳ್ಳುವ ಕಾರ್ಯವನ್ನು ಮಾಡಿದರೆ ಶತ್ರು ಭಯವಿರುವುದೇ ಇಲ್ಲ " ಎಂದನು.

" ಹಾಗೆ ಮಾಡುವುದರಿಂದ ನಾವು ಶತ್ರುವಿನ ಮುಂದೆ ಬಗ್ಗಿದಂತೆಯೇ ಆಯಿತು. ಹಾಗಾಗದಂತೆ ಅವನಿಗಿಂತ ಮೊದಲು ನಾವೇ ಮಿಂಚಿನ ದಾಳಿ ನಡೆಸಿ ಅವನನ್ನು ಬಂದಿಯಾಗಿ ಹಿಡಿದು ಬಿಟ್ಟರೆ, ಅವನು ನಮಗೆ ಸಾಮಂತನಾಗುತ್ತಾನಷ್ಟೆ?" ಎಂದನು ಪ್ರಸೇನವರ್ಮ.

ಕೂಡಲೇ ವಿಶಾಖನು. " ಹೌದು ಪ್ರಭೂ! ತಮ್ಮ ಆಲೋಚನೆ ಅದ್ಭುತವಾಗಿದೆ. ಹಾಗೆಯೇ ಮಾಡಿಬಿಡಿರಿ." ಎಂದನು.

ಪ್ರಸೇನವರ್ಮ ರಾಜನು ಅವನನ್ನು ಕಳುಹಿಸಿ, ಪ್ರಶಾಂತನೆಂಬ ಎರಡನೇ ಉಪ ಮಂತ್ರಿಯನ್ನು ತನ್ನ ಬಳಿಗೆ ಕರೆಯಿಸಿದನು. ಅವನಿಗೆ ಕೂಡಾ ವಿಶಾಖನಿಗೆ ಹೇಳಿದ ಹಾಗೆಯೇ ಹೇಳಿ, " ಈಗ ಮುಖ್ಯ ಸಮಸ್ಯೆ ಏನೆಂದರೆ, ನಮ್ಮ ಖಜಾನೆ ದಿನದಿಂದ ದಿನಕ್ಕೆ ಇಳಿಯುತ್ತಾ ಹೋಗುತ್ತಿದೆಯೆಂಬ ಸಂಗತಿ ನಿಮಗೂ ಗೊತ್ತಿದೆ. ಅದನ್ನು ಈಗ ಹೇಗಾದರೂ ಭರ್ತಿ ಮಾಡಲೇಬೇಕು. ಅದಕ್ಕೆ ಅನುಭವಶಾಲಿಗಳಾದ ನೀವು ಒಳ್ಳೆಯ ಆಲೋಚನೆ ಹೇಳಬೇಕು. ಏನು ಹೇಳುವಿರಿ? " ಎಂದು ಕೇಳಿದನು.

" ಅದಕ್ಕೇಕೆ ಅಷ್ಟು ಯೋಚನೆ ಪ್ರಭೂ? ಪ್ರಜೆಗಳ ಮೇಲೆ ಯಾವುದಕ್ಕಾದರೂ ಪ್ರತ್ಯೇಕ ತೆರಿಗೆ ಹಾಕೋಣ. ಅದರಿಂದ ಖಜಾನೆ ಬಹು ಬೇಗದಲ್ಲಿ ತುಂಬಿ ಬಿಡುತ್ತದೆ." ಎಂದನು ಪ್ರಶಾಂತ.

ಪ್ರಸೇನನು ಸಣ್ಣಗೆ ನಗುತ್ತ, " ಅದರಿಂದ ಖಜಾನೆ ತುಂಬುವುದೇನೋ ನಿಜ. ಹಾಗೆಲ್ಲಾ ಪ್ರಜೆಗಳ ಮೇಲೆ ಇನ್ನಷ್ಟು ತೆರಿಗೆಯ ಭಾರವನ್ನು ಹೇರಿಬಿಟ್ಟರೆ, ಅವರಿಗೆ ನಮ್ಮ ಮೇಲೆ ಭಕ್ತಿ ವಿಶ್ವಾಸಗಳು ನಶಿಸುತ್ತವೆ. ಪ್ರಜಾ ಕ್ಷೇಮವನ್ನು ಬಯಸುವ ರಾಜನು ಅಂತಹ ಕೆಲಸಕ್ಕೆ ತಲೆ ಹಾಕುವುದು ಸರಿಯಲ್ಲ. ಅದಕ್ಕೆ ಬದಲಾಗಿ ನಾವೇ ಖರ್ಚುಗಳ ವಿಷಯದಲ್ಲಿ ಮಿತಿಮಾಡಿಕೊಂಡರೆ ಖಜಾನೆ ಕರಗುವುದು ಕಡಿಮೆಯಾಗುತ್ತದೆ. ಈ ಪದ್ಧತಿ ಒಳ್ಳೆಯದೋ ಅಲ್ಲವೋ ಎಂಬುದನ್ನು ನೀವೇ ಆಲೋಚಿಸಿ ಹೇಳಿರಿ." ಎಂದನು.

ಪ್ರಶಾಂತನು ವಿನಯವಾಗಿ ತಲೆಯಾಡಿಸಿ, " ಹೌದು. ಇದರಲ್ಲಿ ಆಲೋಚನೆಗೆ ಏನಿದೆ ? ತಮ್ಮ ಯೋಚನೆ ದಿವ್ಯವಾಗಿದೆ. ಅದೇ ಒಳ್ಳೆಯ ಪದ್ಧತಿ ಕೂಡಾ " ಎಂದನು.

ಪ್ರಸೇನವರ್ಮನು ಪ್ರಶಾಂತವರ್ಮನನ್ನು ಕಳುಹಿಸಿ, ಮೂರನೆಯ ಉಪ ಮಂತ್ರಿ ಶಂಕರ ಭಟ್ಟನೆಂಬುವನನ್ನು ಕರೆಯಿಸಿ, ವಿಶಾಖ, ಪ್ರಶಾಂತರಿಗೆ ಹೇಳಿದಂತೆ ಪ್ರಧಾನ ಸಲಹಾಧಾರ ಪದವಿಯನ್ನು ಕೊಡಲಿರುವ ತನ್ನ ಆಲೋಚನೆಯನ್ನು ತಿಳಿಸಿ,

"ಈಗ ನಮ್ಮ ರಾಜ್ಯದ ದಕ್ಷಿಣ ಮಂಡಲದಲ್ಲಿ ಕಾಲಕಾಲಕ್ಕೆ ಮಳೆ ಬೀಳದೆ, ದುರ್ಭಿಕ್ಷದ ಪರಿಸ್ಥಿತಿ ಉಂಟಾಗಿರುವುದೆಂದು ಸುದ್ದಿ ಬಂದಿದೆ. ಇದರ ನಿವಾರಣೆಗೆ ಬೇಕಾದಲ್ಲೆಲ್ಲಾ ಬಾವಿಗಳನ್ನು ತೋಡಿಸುವುದು ಒಳ್ಳೆಯದೆಂದು ನನಗೆ ತೋರುತ್ತದೆ. ನಿಮ್ಮ ಆಲೋಚನೆ ಹೇಗೆ?" ಎಂದು ಕೇಳಿದನು.

ಶಂಕರಭಟ್ಟನು ಸ್ವಲ್ಪ ಹೊತ್ತು ಆಲೋಚನೆ ಮಾಡಿ, "ಮಹಾಪ್ರಭೂ, ದಕ್ಷಿಣ ಮಂಡಲದಲ್ಲಿ ಮಳೆ ಬಾರದೆ ಕ್ಷಾಮದ ಕಾಟ ಬಹಳ ಕಟುವಾಗಿದೆ. ಈಗಲೇ ಜನರು ಹಿಟ್ಟಿಗೆ ಕಾಳಿಲ್ಲದೆ ಹಸಿವೆಯಿಂದ ಒಣಗಿ ಸಾಯುತ್ತಿದ್ದಾರಂತೆ. ಬಾವಿ ತೋಡಿ ನೀರು ಬರಿಸಲು ಸ್ವಲ್ಪ ಕಾಲ ಬೇಕಾಗುತ್ತದಷ್ಟೆ? ಈಗ ಮೊದಲು ಅಲ್ಲಿಯ ಜನರಿಗೆ ಬೇಕಾದುದು ಹೊಟ್ಟೆಗೆ ತಿಂಡಿ. ನೀವೀಗ ಬಾವಿಗಳನ್ನು ತೋಡಿಸುತ್ತಾ ಕುಳಿತರೆ ಇನ್ನಷ್ಟು ದುರ್ಮರಣಗಳು ಉಂಟಾಗುತ್ತವೆ. ತಾವು ತಮ್ಮ ಸಂಗ್ರಹದಲ್ಲಿದ್ದ ಧಾನ್ಯಗಳನ್ನು ಮೊದಲು ದಕ್ಷಿಣ ಮಂಡಲಕ್ಕೆ ಕಳುಹಿಸಿ ಹಂಚಿಸಬೇಕು. ಬಾವಿಗಳನ್ನು ತೋಡಿಸುವುದಕ್ಕಿಂತ, ಆ ಪ್ರಾಂತದಲ್ಲಿ ಪ್ರವಹಿಸುವ ಜೀವನದಿಯಾದ ಗಾಯತ್ರಿಗೆ ಅಣೆಕಟ್ಟು ಕಟ್ಟಿಸಿ, ಆ ಜಲವನ್ನು ಊರುಗಳ ಕಡೆಗೆ ಕಾಲುವೆಗಳ ಮೂಲಕ ತಿರುಗಿಸುವುದು ಸುಲಭ. ಪ್ರಯೋಜನವೂ ಹೆಚ್ಚು. ಬಾವಿಗಳನ್ನು ತೋಡುವ ಖರ್ಚುಗಳಿಗಿಂತ ಕಾಲುವೆ ತೋಡುವ ಖರ್ಚು ಕಡಿಮೆ. ಆದರಿಂದ ಒಣ ಪ್ರದೇಶಗಳೆಲ್ಲಾ ಸಸ್ಯಶ್ಯಾಮಲವಾಗಿ ಸೊಗಯಿಸುತ್ತವೆ" ಎಂದನು.

ಪ್ರಸೇನವರ್ಮನು ಸಣ್ಣಗೆ ಕೋಪದಿಂದ, "ಹಾಗಾದರೆ ನನ್ನ ಅಭಿಪ್ರಾಯಕ್ಕೆ ನೀವು ಬೆಲೆ ಕೊಡುವುದಿಲ್ಲವೆಂದಾಯಿತು. ಅಂದರೆ ನನ್ನ ಅಭಿಪ್ರಾಯ ಸರಿಯಲ್ಲವೆನ್ನುವಿರಿ. ಹೌದಾ?" ಎಂದು ಕೇಳಿದನು.

ಶಂಕರಭಟ್ಟನು ಸ್ವಲ್ಪವೂ ಶಂಕಿಸದೆ, "ತಮ್ಮ ಅಭಿಪ್ರಾಯ ಪ್ರಸ್ತುತ ಕಾಲಕ್ಕೆ ಸರಿಯಲ್ಲವೆಂದಷ್ಟೇ ಹೇಳುತ್ತೇನೆ. ಮಹಾರಾಜರೇ, ಒಂದು ಕಡೆಯಲ್ಲಿ ಮನೆಗಳಿಗೆ ಬೆಂಕಿಬಿದ್ದಿರುವಾಗ ಬಾವಿ ತೋಡಲು



ಹೋಗುವ ಪ್ರಯತ್ನದಂತಹುದು ತಮ್ಮ ಅಭಿಪ್ರಾಯ. ನನ್ನನ್ನು ಕರೆದು ಆಲೋಚನೆ ಕೇಳಿದುದರಿಂದ ನನಗೆ ತೋರಿದುದನ್ನು ಹೇಳಿದೆನು." ಎಂದನು.

"ನನಗೆ ಕೋಪ ಬರುವ ಹಾಗೆ ಮಾಡಿದರೆ ಏನಾಗುವುದೆಂದು ನಿಮಗೆ ಗೊತ್ತಿದೆಯಷ್ಟೆ ?"

"ಪ್ರಭುಗಳು ಕ್ಷಮಿಸಬೇಕು. ತಾವು ಸರ್ವ ಸ್ವತಂತ್ರರು. ಒಳಿತಾಗಬೇಕೆಂಬ ಒಳ್ಳೆಯ ಉದ್ದೇಶದಲ್ಲಿ ನನ್ನನ್ನು ಕೇಳಿದ್ದೀರಿ. ನನ್ನ ಅಭಿಪ್ರಾಯ ತಮಗೆ ಹಿಡಿಸದಿದ್ದರೆ ಪ್ರಧಾನ ಸಲಹಾದಾರ ಪದವಿ ನನಗೆ ಕೊಡಲಾರಿರಿ. ಅಥವಾ ಇರುವ ಪದವಿಯಿಂದಲೂ ಕಿತ್ತು ಹಾಕುವಿರಿ. ಅದಕ್ಕಾಗಿ ನಾನು ಸರಿಯಲ್ಲದುದನ್ನು ಹೇಳಲಾರೆನು" ಎಂದನು ಶಂಕರ ಭಟ್ಟ.

ಪ್ರಸೇನನು ಶಂಕರಭಟ್ಟನನ್ನು ಕಳುಹಿಸಿ ಮರುದಿನ ಸಭಾ ಮುಖದಲ್ಲಿ ಶಂಕರಭಟ್ಟನನ್ನು ತನ್ನ ಪ್ರಧಾನ ಸಲಹಾದಾರನನ್ನಾಗಿ ನಿಯಮಿಸಿಕೊಂಡಿರುವುದಾಗಿ ಪ್ರಕಟಿಸಿದನು.

ಇದನ್ನು ಕೇಳಿ ಮಂತ್ರಿಗಳೂ ಸಭಿಕರೂ ಆಶ್ಚರ್ಯಪಟ್ಟರು. ಮಹಾರಾಜನಿಗೂ ಶಂಕರಭಟ್ಟನಿಗೂ ನಡೆದ ವಾಗ್ವಿವಾದವನ್ನು ಕುರಿತು ಅವರಿಗೆಲ್ಲ ಗೊತ್ತಾಗಿತ್ತು. ಶಂಕರಭಟ್ಟನಿಗೆ ಯಾವುದೋ ದೊಡ್ಡ ಶಿಕ್ಷೆ ಬೀಳುತ್ತದೆಂದುಕೊಂಡಿದ್ದರು.

ಪ್ರಸೇನವರ್ಮ ರಾಜನು ಆಶ್ಚರ್ಯದಿಂದ ತನ್ನ ಕಡೆಗೆ ನೋಡುವ ಸಭಿಕರನ್ನು ಕುರಿತು, "ನಾನು ಮಾಡಿದ ನಿರ್ಣಯವು ನಿಮ್ಮಗೆಲ್ಲಾ ಆಶ್ಚರ್ಯವನ್ನುಂಟುಮಾಡಿರಬೇಕು. ಈ ಹೊಸ ಪ್ರಧಾನ ಸಲಹಾದಾರರು ಹಳೆಯ ಶಿವನಾಥರಂತೆಯೇ ನನ್ನ ಹಿತ ಚಿಂತನೆಯ ಮಂತ್ರಾಲೋಚಕರಾಗಿರಬೇಕೆಂಬುದೇ ನನ್ನ ಉದ್ದೇಶ. ನನಗೆ ಸ್ವಲ್ಪ ಮುಂಗೋಪವಿದೆ. ನಾನು ಹೇಳಿದುದಕ್ಕೆ ವ್ಯತಿರೇಕವಾಗಿ ಹೇಳುವವರ ಮೇಲೆ ಥಕ್ಕನೆ ಕೋಪಿಸುವುದುಂಟು. ಅಂತಹ ಸಮಯದಲ್ಲಿ ನಿಜವಾದ ಮಂತ್ರಾಲೋಚನೆ ಹೇಳುವವರು ರಾಜ್ಯದ ಕ್ಷೇಮಕ್ಕಿಂತ ತಮ್ಮ ಉದ್ಯೋಗ ಭದ್ರತೆಯನ್ನೇ ಮುಖ್ಯವಾಗಿಟ್ಟುಕೊಂಡು ಹೌದಣ್ಣಗಳ ಹಾಗೆ ವರ್ತಿಸಿದರೆ ದೇಶಕ್ಕೆ ಕೆಡುಕೇ ಆಗುತ್ತದೆ. ಇದಿರಾದ ಸಮಸ್ಯೆಗೆ ತನಗೆ ತೋರುವ ಸಲಹೆಯನ್ನು ನಿರ್ಭೀತಿಯಿಂದ ಹೇಳುವವನೇ ನಿಜವಾದ ಮಂತ್ರಾಲೋಚಕನು, ಸಲಹಾದಾರನು. ಅಂತಹ ಗುಣ ಶಿವನಾಥರಲ್ಲಿತ್ತು. ಅದೇ ಗುಣ ಶಂಕರಭಟ್ಟರಲ್ಲಿಯೂ ಇರುವುದು ತಿಳಿಯಿತು. ಆದುದರಿಂದಲೇ ಅವರನ್ನು ಉಪಮಂತ್ರಿಯಿಂದ ಪ್ರಧಾನ ಸಲಹಾದಾರ ಪದವಿಗೆ ನಿಯಮಿಸಿದ್ದೇನೆ." ಎಂದು ವಿವರಿಸಿ ಹೇಳಿದನು.





# ತಲೆ ತಿರುಗಿದ ನರಿ

**ಪೂ**ರ್ವಕಾಲದಲ್ಲಿ ಒಂದು ಸಾರಿ ಬೋಧಿಸತ್ವನು ವಾರಣಾಸಿ ನಗರದಲ್ಲಿರುವ ಒಂದು ದೊಡ್ಡ ಪಂಡಿತ ಕುಟುಂಬದಲ್ಲಿ ಜನಿಸಿದನು. ಒಳ್ಳೆಯ ವಿದ್ಯಾಭ್ಯಾಸ ದಿಂದ ಯುಕ್ತ ವಯಸ್ಸು ಬರುವಾಗ ಸಕಲ ಶಾಸ್ತ್ರ ಗಳನ್ನೂ ಅಭ್ಯಾಸ ಮಾಡಿ, ನಗರದ ಪಂಡಿತರೊಳ ಗೆಲ್ಲಾ ಹೆಚ್ಚಿನ ಪ್ರತಿಭಾಶಾಲಿಯಾಗಿ ಬೆಳಗತೊಡಗಿ ದನು. ಅದಕ್ಕೆ ತಕ್ಕಹಾಗೆ ಮಹಾರಾಜನು ಅವನನ್ನು ತನ್ನ ಪ್ರಧಾನ ಪುರೋಹಿತನನ್ನಾಗಿ ನಿಯಮಿಸಿ ಗೌರವಿಸಿದನು.

ಬೋಧಿಸತ್ವನು ಮೊದಲು ಶಾಸ್ತ್ರ ಗ್ರಂಥಗಳನ್ನು ಓದುತ್ತಿದ್ದ ಸಮಯದಲ್ಲಿ ಒಂದು ಅದ್ಭುತವಾದ ಮಂತ್ರವನ್ನು ಕಂಡುಕೊಂಡಿದ್ದನು. ಆ ಮಂತ್ರದ ಪ್ರಭಾವದಿಂದ ಇತರರ ಮೇಲೆ ಸರ್ವಾಧಿಕಾರ ಗಳನ್ನೂ ಚಲಾಯಿಸಿಬಿಡಬಹುದು. ಆ ಮಂತ್ರವನ್ನು ಒಂದು ಸಾರಿ ಪಠಿಸಿಬಿಟ್ಟರೆ ಎಂಥವರಾದರೂ ಮಂತ್ರ ಪಠಿಸಿದವನ ದಾಸರಾಗಿ ಹೇಳಿದ ಹಾಗೆ ಕೇಳುವವ ರಾಗುತ್ತಾರೆ. ಇದು ಆಕಸ್ಮಾತ್ತಾಗಿ ಅವನಿಗೆ ಗೊತ್ತಾದ ಮಂತ್ರವೇ ಹೊರತು ಬೇಕೆಂದು ಹುಡುಕಿ ಕಲಿತುಕೊಂಡದ್ದಲ್ಲ.

ಅಷ್ಟು ತಿಳಿದ ಮೇಲೆ ಬೋಧಿಸತ್ವನಿಗೆ ಆ ಮಂತ್ರ ದಿಂದ ತನಗೇನೂ ಪ್ರಯೋಜನವಿಲ್ಲವೆಂದು ತೋರಿತು. ಆದರ ಪ್ರಭಾವದಿಂದ ಯಾರನ್ನಾದರೂ ದಾಸತ್ವಕ್ಕೆ ಇಳಿಸಿಕೊಳ್ಳುವ ಆಶೆ ಅವನಿಗಿರಲಿಲ್ಲ. ಆದರೆ ಅದು ಮರೆತುಹೋಗದಂತೆ ನೆನಪಿಟ್ಟುಕೊಳ್ಳ ಬೇಕೆಂಬ ಆಲೋಚನೆ ಮಾತ್ರ ಅವನಿಗಿತ್ತು.

ಆದಕ್ಕಾಗಿ ಬೋಧಿಸತ್ವನು ಅರಣ್ಯಕ್ಕೆ ಹೋಗಿ ಒಂದಾನೊಂದು ಏಕಾಂತ ಪ್ರದೇಶದಲ್ಲಿ ನಿಂತು ಸುತ್ತು ಮುತ್ತು ನೋಡಿ ಯಾರೂ ಇಲ್ಲವೆಂದು ದೃಢಪಡಿಸಿ ಕೊಂಡನು. ಆಮೇಲೆ ಅಲ್ಲಿದ್ದ ಒಂದು ಎತ್ತರವಾದ ಬಂಡೆಯ ಮೇಲೆ ಕುಳಿತು ಸಮೀಪದಲ್ಲೆಲ್ಲಿಯೂ ಯಾರೂ ಸುಳಿಯುವ ಲಕ್ಷಣವಿಲ್ಲವೆಂಬುದನ್ನು ಖಚಿತ ಪಡಿಸಿಕೊಂಡನು. ಆಮೇಲೆ ಬೋಧಿಸತ್ವನು ಅದ್ಭುತ ಮಂತ್ರವನ್ನು ಕೊರಳೆತ್ತಿ ಅನೇಕ ಬಾರಿ ಪಠಿಸಿ ಎಂದೂ ಮರೆಯದಂತೆ ಉರು ಹಾಕಿದನು. ಸೂರ್ಯ ಮುಳುಗುವ ಹೊತ್ತು ಸಮೀಪಿಸಿದಾಗ, ಬಂಡೆಯ ಮೇಲಿನಿಂದೆದ್ದು ನಗರಕ್ಕೆ ಹೊರಟನು.

ಆ ಸಮಯದಲ್ಲಿ ಬಂಡೆಯ ಹಿಂದೆ ಇದ್ದ ಒಂದು ಬಿಲದೊಳಗೆ ಅಡಗಿದ್ದ ನರಿ, ಆನಂದದಿಂದ ಕುಣಿ



ಯುತ್ತ ಹೊರಗೆ ಬಂದು, "ಓ ಹೋ ಯ್! ಪಂಡಿತಾ! ನೀನು ಪಠಿಸಿದ ಮಂತ್ರವನ್ನು ನಾನು ಸ್ಪಷ್ಟವಾಗಿ ಉಚ್ಚರಿಸಿಕೊಂಡು ಕಂಠಸ್ಥ ಮಾಡಿಕೊಂಡೆನು. ನಿನಗೆ ಸಾವಿರ ನಮಸ್ಕಾರಗಳು" ಎಂದು ಹೇಳಿ ಅಲ್ಲಿಂದ ಓಡಲು ತೊಡಗಿತು.

ಅದನ್ನು ಕೇಳಿ ಬೋಧಿಸತ್ವನಿಗೆ ಚಿವುಕ್ಕೆಂದಿತು. ನರಿಯಂತಹ ಹೀನ ಪ್ರಾಣಿ ಅಷ್ಟೊಂದು ಶಕ್ತಿವಂತವಾದ ಮಂತ್ರವನ್ನು ಕಲಿತುದನ್ನು ತಿಳಿದು ಬೋಧಿಸತ್ವನು ನೊಂದುಕೊಂಡು, ಹೇಗಾದರೂ ಆ ನರಿಯನ್ನು ಹಿಡಿಯಬೇಕೆಂದು ಅದರ ಬೆಂಬತ್ತಿದನು. ಆದರೆ ಆಗಲೇ ಕತ್ತಲೆ ಕವಿಯಲಾರಂಭಿಸಿದುದರಿಂದ, ನರಿ ಪೊದೆಗಳ ಮರೆಯಲ್ಲಿ ತಪ್ಪಿಸಿಕೊಂಡು ಮಾಯವಾಗಿ ಹೋಯಿತು.

ಆ ನರಿ ಪೂರ್ವ ಜನ್ಮದಲ್ಲಿ ಒಬ್ಬ ಬ್ರಾಹ್ಮಣನಾಗಿ ಹುಟ್ಟಿ, ಸಾಯುವವರೆಗೂ, ಬೇಡದ ದುಸ್ತಂತ್ರಗಳಿಂದ ಪರರಿಗೆ ಹಾನಿ ಮಾಡುತ್ತ ಕಾಲ ಕಳೆದು, ಸತ್ತು ನರಿಯ ಜನ್ಮವೆತ್ತಿತ್ತು. ಆ ಮಾನವ ಜನ್ಮದ ಕಾರಣದಿಂದ ಆ ಮಂತ್ರಕ್ಕಿರುವ ಅದ್ಭುತ ಶಕ್ತಿ ಗೊತ್ತಾಗಿತ್ತು. ಆದುದರಿಂದಲೇ ಅದಕ್ಕೆ ಅಷ್ಟು ಆನಂದ. ಓಡಿ ಹೋಗುವ ಆ ನರಿಯ ಇದಿರಾಗಿ, ಅದಕ್ಕಿಂತಲೂ ದೇಹಪುಷ್ಟಿಯೂ, ಹರಿತ ಹಲ್ಲುಗಳೂ, ಇರುವ ದೊಡ್ಡ ನರಿಯೊಂದು ಬರುತ್ತಿತ್ತು. ಕೂಡಲೇ ಓಡುವ ನರಿ ಮಂತ್ರವನ್ನು ಪಠಿಸಿತು. ಇದಿರಾಗಿ ಸಮೀಪ ಬಂದ ಆ ದೊಡ್ಡ ನರಿ, ಮಂತ್ರದ ನರಿಗೆ ಬಗ್ಗಿ ನಮಸ್ಕಾರ ಮಾಡಿ ಬಹಳ ವಿಧೇಯತೆಯಿಂದ ಬದಿಗೆ ತೊಲಗಿತು. ಮಂತ್ರದ ಫಲ ಹೀಗೆ ಪ್ರತ್ಯಕ್ಷವಾದ ಮೇಲೆ ಮಂತ್ರ ಕಲಿತ ನರಿಗೆ ಆದ ಸಂತೋಷಕ್ಕೆ ಪಾರವೇ ಇಲ್ಲ.

ಈ ವಿಧವಾಗಿ ಮಂತ್ರದ ನರಿ ಕೆಲವು ದಿನಗಳಲ್ಲಿ ಅನೇಕ ನೂರು ನರಿಗಳಿಗೆಲ್ಲಾ ಮೇಲಿನದಾಗಿ ದೊರೆಯಾಯಿತು. ಆಮೇಲೆ ಅದು ತನ್ನ ಮಂತ್ರಶಕ್ತಿಯನ್ನು ಹಂದಿಗಳ ಮೇಲೂ, ಹುಲಿ, ಸಿಂಹ, ಆನೆಗಳ ಮೇಲೆ ಕೂಡಾ ಪ್ರಯೋಗ ಮಾಡಿ, ಅವುಗಳನ್ನೆಲ್ಲಾ ತನಗೆ ವಿಧೇಯವಾಗಿರುವಂತೆ ಮಾಡಿತು. ಆ ಪ್ರಾಣಿಗಳೆಲ್ಲವೂ ಮಂತ್ರದ ನರಿಯನ್ನು ತಮ್ಮ ರಾಜನಾಗಿ ಅಂಗೀಕರಿಸಿ ಭಾರಿ ದೊಡ್ಡ ಉತ್ಸವ ಮಾಡಿದುವು. ಈಗ ಆ ನರಿಗೆ ಮಾಡಿದ್ದೇ ಮಟ್ಟ, ಕಟ್ಟಿದ್ದೇ ಪಟ್ಟ ಎಂಬ ಸ್ಥಿತಿ ಬಂದಿತು.

ರಾಜ ನರಿ ಒಂದು ಹೆಣ್ಣು ನರಿಯನ್ನು ವಿವಾಹ ಮಾಡಿಕೊಂಡು, ಅದನ್ನು ರಾಣಿಯೆಂದು ಪ್ರಕಟಪಡಿಸಿತು. ಕೆಲವು ಸಿಂಹ, ಹುಲಿಗಳು ಮಂತ್ರಿಗಳಾಗಿ, ಸೇನಾಪತಿಗಳಾಗಿ ಪದವಿ ಪಡೆದುವು. ಹೀಗೆ ಎಲ್ಲಾ ಅರಣ್ಯ ಮೃಗಗಳು ತನಗೂ ತನ್ನ ಹೆಂಡತಿಗೂ ಸೇವೆ ಮಾಡುತ್ತ ಭಯಭಕ್ತಿಯಿಂದಿರುವುದನ್ನು ನೋಡಿ ನರಿಯ ತಲೆ ತುಂಬಾ ಗರ್ವವೇರಿತು.

ಎರಡು ಆನೆಗಳನ್ನು ಅಕ್ಕಪಕ್ಕಗಳಲ್ಲಿ ನಿಲ್ಲಿಸಿ, ಅವುಗಳ ಮೇಲೆ ಸಿಂಹವನ್ನು ನಿಲ್ಲಿಸಿ, ಆದರ ಮೇಲೆ

ರಾಜ ನರಿ ಜೋರಾಗಿ ಕುಣಿತುಕೊಳ್ಳುತ್ತಿತ್ತು. ಕೆಲವು ಪ್ರಾಣಿಗಳು ತಮ್ಮ ಜಂಬುಕ ರಾಜನನ್ನು ಮೀರಿಸುವ ಬೇರೆ ರಾಜನು ಪ್ರಪಂಚದಲ್ಲಿಲ್ಲವೆಂದು ಹೊಗಳಿ ಹಾಡಲು ತೊಡಗಿದುವು.

ಇದನ್ನೆಲ್ಲಾ ಕೇಳುತ್ತಿದ್ದಂತೆ ನರಿಗೆ ಗರ್ವದಿಂದ ಆನಂದದ ಮಯಕವೆದ್ದು ತಲೆ ತಿರುಗತೊಡಗಿತು. "ಕೇವಲ ಅರಣ್ಯ ಪ್ರಾಣಿಗಳಿಗೆ ಮಾತ್ರ ರಾಜನೆಂಬುದಕ್ಕೆ ಏಕೆ ತೃಪ್ತನಾಗಿರಬೇಕು ? ಮಾನವ ಪ್ರಾಣಿಗಳ ರಾಜ್ಯವನ್ನೂ ಏಕೆ ಆಕ್ರಮಿಸಬಾರದು ? ಒಮ್ಮೆಗೇ ವಾರಣಾಸಿ ನಗರವನ್ನೇ ಏಕೆ ಜಯಿಸಬಾರದು ? ಎಂಬ ಆಲೋಚನೆ ಅದಕ್ಕೆ ಬಂತು.

ಕೆಲವು ದಿನಗಳಲ್ಲಿ ಆ ನರಿ ಮೃಗಗಳಲ್ಲಿ ಸಾಟಿಯಿಲ್ಲದ ಬಲಶಾಲಿಗಳಾದ ಸಿಂಹಗಳನ್ನೂ, ಇತರ ಮೃಗಗಳನ್ನೂ ಕೂಡಿಸಿ, ದೊಡ್ಡ ಮೃಗ ಸೈನ್ಯದೊಂದಿಗೆ ವಾರಣಾಸಿ ನಗರದ ಮೇಲೆ ದಾಳಿ ಹೊರಟಿತು. ದೂರದಿಂದ ಬರುವ ಮೃಗ ಸೈನ್ಯವನ್ನು ನೋಡಿ ನಗರವಾಸಿಗಳು ಕೆಲವರು ಹೆದರಿ ನಗರ ಬೀದಿಗಳಲ್ಲಿ ಓಡುತ್ತ, ಈ ವಾರ್ತೆಯನ್ನು ಕೂಗಿ ಕೂಗಿ ಎಲ್ಲರಿಗೂ ತಿಳಿಸಿದರು. ನಗರದಲ್ಲಿ ಅಲ್ಲಕಲ್ಲೋಲವೆದ್ದಿತು.

ರಾಜ ನರಿ ನಗರದ ದ್ವಾರದ ಬಳಿಗೆ ಬಂದು, ಸಾವಿನ ಭಯದಿಂದ ನಡುಗುತ್ತಿದ್ದ ಕಾವಲಿನವರೊಂದಿಗೆ, "ಎಲೋ, ನೀವು ಕೂಡಲೇ ಹೋಗಿ ನಿಮ್ಮ ರಾಜನ ಹತ್ತಿರ ಅರಣ್ಯದ ಜಂಬುಕರಾಜನಿಗೆ ತಲೆಬಾಗಿ ವಶವಾಗುವಂತೆ ಹೇಳಿ ಬಿಡಿ. ಅದಕ್ಕೆ · ತಪ್ಪಿದರೆ ನನ್ನ ಮೃಗ ಸೈನ್ಯದಿಂದ ನಿಮ್ಮ ನಗರವನ್ನು ವಶಪಡಿಸಿಕೊಳ್ಳದೆ ಬಿಡುವುದಿಲ್ಲ. ಎಚ್ಚರ!" ಎಂದಿತು.

ಕಾವಲಿನವರ ಮೂಲಕ ಆ ಸಂಗತಿಯನ್ನು ತಿಳಿದ ರಾಜನಿಗೆ ಏನು ಮಾಡಬೇಕೆಂದು ತಿಳಿಯಲಿಲ್ಲ. ಆಗ ಬೋಧಿಸತ್ವನು ರಾಜನೊಂದಿಗೆ, "ರಾಜಾ, ಈ ಸಮಸ್ಯೆಯನ್ನು ಪರಿಷ್ಕರಿಸುವ ಕೆಲಸವನ್ನು ನನಗೆ ಒಪ್ಪಿಸಿ ಬಿಡಿರಿ " ಎಂದನು.

ರಾಜನ ಅನುಮತಿಯ ಮೇಲೆ ಬೋಧಿಸತ್ವನು ಕೋಟೆಯ ಗೋಡೆಯ ಮೇಲೆ ಹೋಗಿ ನರಿ ರಾಜ



ನನ್ನು ನೋಡಿ, "ಓ ಜಂಬುಕ ರಾಜಾ! ನೀನು ನಗರವನ್ನು ಹೇಗೆ ಜಯಿಸಬೇಕೆಂದಿರುವಿ ?" ಎಂದು ಪ್ರಶ್ನಿಸಿದನು.

ರಾಜನರಿ ಕಿಪಕಿಪನೆ ನಕ್ಕು, "ಅಷ್ಟೂ ಗೊತ್ತಾಗುವುದಿಲ್ಲವೆ ? ಅದು ಬಹಳ ಸುಲಭ. ನನ್ನ ಸೈನಿಕ ಸಿಂಹಗಳೆಲ್ಲಾ ಏಕ ಕಂಠದಿಂದ ಒಂದೇಸಾರಿ ಗರ್ಜಿಸಿ ಬಿಟ್ಟರೆ, ನಿಮ್ಮ ಸೈನಿಕರೂ ಪೌರರೂ ಪ್ರಾಣಭೀತಿಯಿಂದ ಚೆಲ್ಲಾಚೆದರಾಗಿ ಓಡಿ ಹೋಗುತ್ತಾರೆ. ಇದೊಂದು ಪ್ರಶ್ನೆಯೆ ?" ಎಂದಿತು.

ಬೋಧಿಸತ್ವನಿಗೆ ನರಿಯ ಮಾತುಗಳು ನಿಜವೆಂದೇ ತೋರಿತು. ಅವನು ಕೋಟೆಯ ಗೋಡೆಯಿಂದ ಕೆಳಗಿಳಿದು ರಾಜೋದ್ಯೋಗಿಗಳೊಂದಿಗೆ, "ನೀವು ಕೂಡಲೇ ಹೋಗಿ ನಗರವಾಸಿಗಳೆಲ್ಲರೂ ಕಿವಿಯೊಳಗೆ ಹತ್ತಿಯ ಉಂಡೆ ತುರುಕಿ, ಒತ್ತಿಕೊಳ್ಳಬೇಕೆಂದು ಹೇಳಿರಿ" ಎಂದನು. ಹಾಗೆ ಎಲ್ಲರೂ ಕಿವಿಗಳಲ್ಲಿ ಹತ್ತಿ ತುರುಕಿ ಆದ ಮೇಲೆ, ಬೋಧಿಸತ್ವನು ಕೋಟೆಯ ಗೋಡೆ ಹತ್ತಿ ನರಿಯನ್ನು ನೋಡಿ, "ಜಂಬುಕ ರಾಜಾ! ನಗರವನ್ನು ಜಯಿಸಲು ನೀನು ಮಾಡುವ ಪ್ರಯತ್ನ ಮಾಡು" ಎಂದನು.

ಎರಡು ಆನೆಗಳ ಮೇಲೆ ನಿಂತುಕೊಂಡಿದ್ದ ಸಿಂಹದ ಬೆನ್ನಿನಲ್ಲಿ ಕುಳಿತಿದ್ದ ರಾಜನರಿ, ಸಿಂಹಗಳೆಲ್ಲಾ ಒಂದೇಸಾರಿ ಗರ್ಜಿಸಬೇಕೆಂದು ಆಜ್ಞೆ ಮಾಡಿತು. ಮರುಕ್ಷಣದಲ್ಲಿ ಸುತ್ತಲಿನ ಪರಿಸರಗಳೆಲ್ಲಾ ಗದಗದಿಸುವಂತೆ ಸಿಂಹಗಳು ಭಯಂಕರವಾಗಿ ಗರ್ಜಿಸಿದುವು. ನಗರವಾಸಿಗಳೆಲ್ಲಾ ಕಿವಿಗಳನ್ನು ಹತ್ತಿಯಿಂದ ಮುಚ್ಚಿಕೊಂಡಿದ್ದ ಕಾರಣದಿಂದ ಅವರಾರಿಗೂ ಸಿಂಹಗಳ ಗರ್ಜನಾಧ್ವನಿ ಕೇಳಲಿಲ್ಲ.

ಆದರೆ ಆ ಗರ್ಜನೆಗಳನ್ನು ಕೇಳಿದ ಕೂಡಲೇ ರಾಜನರಿಯನ್ನು ಹೊತ್ತುಕೊಂಡಿದ್ದ ಎರಡು ಆನೆಗಳೂ ಹೆದರಿ ಸಿಕ್ಕಾಬಟ್ಟೆ ಹಾರಿದುವು. ಅವುಗಳ ಮೇಲಿದ್ದ ಸಿಂಹವು ಆಧಾರ ತಪ್ಪಿ ನೆಲಕ್ಕೆ ಬಿತ್ತು. ಅದರೊಂದಿಗೇ ಬಿದ್ದ ನರಿಯ ಮೇಲೆ ಆನೆಗಳ ಕಾಲುಗಳು ತುಳಿದು ನೆಲಸಮ ಮಾಡಿದುವು. ಸಿಂಹಗರ್ಜನೆಗಳಿಂದ ಹೆದರಿದ ಆನೆ ಮೊದಲಾದ ಮೃಗಗಳು ಒಂದನ್ನೊಂದು ತುಳಿಯುತ್ತ, ಪರಚುತ್ತ, ಕಚ್ಚುತ್ತ, ತಿವಿಯುತ್ತ ಕೆಲವು ಸತ್ತು, ಉಳಿದುವೆಲ್ಲಾ ಅರಣ್ಯಕ್ಕೆ ಓಡಿದುವು.

ಹೀಗೆ ಮೃಗ ಸೈನ್ಯವೆಲ್ಲಾ ತೊಲಗಿತೆಂದು ಬೋಧಿಸತ್ವನು ಡಂಗುರ ಸಾರಿಸಿದನು. ಜನರೆಲ್ಲಾ ಭಯ ಕಳೆದು ಕಿವಿಗಳ ಹತ್ತಿಗಳನ್ನು ತೆಗೆದು, ನಗರದ ದ್ವಾರದ ಹತ್ತಿರ ಸತ್ತು ಬಿದ್ದ ಮೃಗಗಳನ್ನು ನೋಡಿ, ಮಾಂಸಕ್ಕೆ ಬೇಕಾದುವನ್ನೂ, ಚರ್ಮಕ್ಕೆ ಬೇಕಾದುವನ್ನೂ ಉಪಯೋಗಿಸಿಕೊಂಡರು.

ತಮ್ಮನ್ನೆಲ್ಲ ಘೋರವಾದ ಆಪತ್ತಿನಿಂದ ಕಾಪಾಡಿದ ಬೋಧಿಸತ್ವನನ್ನು ರಾಜನೂ ಪ್ರಜೆಗಳೂ ಹೊಗಳಿ ಕೃತಜ್ಞತೆಗಳನ್ನು ತಿಳಿಸಿದರು.





# ಅಕ್ಬರ್ ಚಕ್ರವರ್ತಿ - ೨

ಆಗ್ರಾದ ಸಮೀಪದ ಸಿಕ್ರೀ ಎಂಬ ಸುಂದರ ಪ್ರಾಂತದ ಹತ್ತಿರವಿರುವ ಚಿಕ್ಕ ಗುಡ್ಡದ ಮೇಲೆ ಷೇಕ್ ಸಲೀಂಚಿಸ್ತೀ ಎಂಬ ಸಾಧು ವಾಸವಾಗಿದ್ದನು. ಆತನ ಮೇಲೆ ಅಕ್ಬರನಿಗೆ ಅತ್ಯಂತ ಭಕ್ತಿಯೂ ಗೌರವವೂ ಇದ್ದುವು.

೧೫೬೯ ನೇ ವರ್ಷದಲ್ಲಿ ಅಕ್ಬರನ ರಾಜಪುತ್ರ ರಾಣಿ ಮಗನನ್ನು ಹಡೆದಳು. ಸಾಧು ಷೇಕ್ ಸಲೀಂ ಆಶೀರ್ವಾದ ಮಾಡಿದುದರಿಂದಲೇ ಪುತ್ರನು ಹುಟ್ಟಿದನೆಂಬ ವಿಶ್ವಾಸದಲ್ಲಿ ಅಕ್ಬರ್ ತನ್ನ ಮಗನಿಗೆ ಸಲೀಂ ಎಂದು ನಾಮಕರಣ ಮಾಡಿದನು. ಅಕ್ಬರನ ತರುವಾಯ ಈ ಯುವ ರಾಜನೇ ಮೊಗಲ್ ಸಿಂಹಾಸನವನ್ನು ಏರಿದನು.





ಸಲೀಂ ಸಾಧುವಿನ ಗೌರವಾರ್ಥವಾಗಿ ಅಕ್ಬರ್ ಸಿಕ್ರೀಯಲ್ಲಿ ಒಂದು ಕೋಟೆ ನಿರ್ಮಿಸಿದನ್ನು ಅಲ್ಲಿ ದೊಡ್ಡ ದೊಡ್ಡ ಅನೇಕ ಅರಮನೆಗಳನ್ನು ಕೂಡಾ ನಿರ್ಮಿಸಿ ಅದನ್ನೇ ತನ್ನ ರಾಜಧಾನಿಯಾಗಿಯೂ ಮಾಡಿಕೊಂಡನು. ಈ ಕೋಟೆಯಿಂದಲೇ ಅವನು ಗುಜರಾತಿನ ಮೇಲೆ ದಂಡೆತ್ತಿ ವಿಜಯ ಸಾಧಿಸಿದನು. ಆಗಿನಿಂದ ಸಿಕ್ರೀಗೆ "ಫತೇ ಪೂರ್ ಸಿಕ್ರೀ" (ವಿಜಯ ನಗರ) ಎಂಬ ಹೆಸರು ಬಂತು.



೧೫೯೩ ನೇ ವರ್ಷದಲ್ಲಿ ಅಕ್ಬರನು ಅಹ್ಮದ್ ನಗರದ ಮೇಲೆ ದಾಳಿ ನಡೆಸಿದನು. ಅದಕ್ಕೆ ಮೊದಲೇ ಅಹ್ಮದ್ ನಗರದ ರಾಜನು ಸತ್ತಿದ್ದನು. ಅವನ ತರುವಾಯ ಅವನ ಸೋದರಿ ಬಿಜಾಪೂರ್ ರಾಣಿ ಚಾಂದ್ ಬೀಬೀ ಅಹ್ಮದ್ ನಗರವನ್ನು ಪಾಲಿಸಿಕೊಂಡಿದ್ದಳು. ಮೊಗಲರ ಸೇನೆಯನ್ನು ಚಾಂದ್ ಬೀಬೀ ಇದಿರಿಸಿದಳು.

ಮೊದಲು ಅಕ್ಬರನ ಸೇನೆಯೊಂದಿಗೆ ಧೈರ್ಯದಿಂದ ಹೋರಾಡಿದ ಚಾಂದ್‌ಬೀಬೀ, ಆಮೇಲೆ ಅಸಂಖ್ಯಾಕರಾದ ಮೊಗಲ್ ಸೈನ್ಯದ ರಭಸಕ್ಕೆ ತಾಳಿಕೊಳ್ಳುವುದು ಕಷ್ಟವೆಂದು ತಿಳಿದಳು. ಆದುದರಿಂದ ಮೊಗಲರು ಅಹ್ಮದ್ ನಗರವನ್ನು ಬಿಟ್ಟು ಹೋಗುವ ಪಕ್ಷದಲ್ಲಿ ಬೇರಾರನ್ನು ಅವರಿಗೆ ಒಪ್ಪಿಸುವುದಕ್ಕೆ ಅಂಗೀಕರಿಸುವುದಾಗಿ ರಾಯಭಾರ ಕಳುಹಿಸಿದಳು.





ಅದರಂತೆ ಮೊಗಲ್ ಸೇನೆಗಳು ಹಿಂದಿರುಗಿದುವು. ಆದರೆ ಚಾಂದ್ ಬೀಬೀಯ ನಿರ್ಣಯವು ಅಹ್ಮದ್ ನಗರದ ಕೆಲವಂದಿ ಪ್ರಮುಖರಿಗೆ ಹಿಡಿಸದೆಹೋದುದರಿಂದ, ಅವರು ಅವಳನ್ನು ಹತ್ಯ ಮಾಡಿಬಿಟ್ಟರು. ಅದರ ಫಲಿತವಾಗಿ ಪೂರ್ತಿ ಅಹ್ಮದ್ ನಗರವು ಮೊಗಲರ ವಶವಾಯಿತು.

ಬಲುಬೇಗದಲ್ಲೇ ಅಕ್ಬರನು ಸುವಿಶಾಲವಾದ ಸಾಮ್ರಾಜ್ಯವನ್ನು ಸ್ಥಾಪಿಸಿದನು. ಅಷ್ಟೇ ಅಲ್ಲದೆ ದೊಡ್ಡ ಪರಿಪಾಲನಾ ದಕ್ಷನೆಂದೂ ಹೆಸರು ಪಡೆದನು. ಅವನ ಮಂತ್ರಿ ಅಬುಲ್ ಫಜಲ್ ಅಕ್ಬರನ ಪರಿಪಾಲನಾ ವಿಧಾನಗಳನ್ನು ವಿವರಿಸುವ "ಐನ್-ಇ-ಅಕ್ಬರೀ" ಎಂಬ ಚಾರಿತ್ರಿಕ ಗ್ರಂಥವನ್ನು ಬರೆದನು.





ಮಂತ್ರಿ ಬೀರಬಲ್, ಪ್ರಸಿದ್ಧ ಸಂಗೀತ ವಿದ್ವಾಂಸನಾದ ತಾನ್ ಸೇನ್, ಕವಿ ಅಬುಲ್ ಫೈಜೀ. ಭೂ ಸಂಸ್ಕರಣೆಗಳನ್ನು ಪ್ರವೇಶಗೊಳಿಸಿದ ತೋಡರ್‌ಮಲ್ ಮೊದಲಾದ ಪ್ರಮುಖರು ಅಕ್ಬರನ ಆಸ್ಥಾನದಲ್ಲಿದ್ದರು.

ಬೇರೆ ಬೇರೆ ಮತಗಳು ಮನುಷ್ಯ-ಮನುಷ್ಯರೊಳಗೆ ಭೇದಗಳನ್ನು ಸೃಷ್ಟಿಸುತ್ತವೆಂದು ತಿಳಿದು ಅಕ್ಬರ್, ಸರ್ವಮತ ಸಮನ್ವಯವಾದ "ದಿನ್-ಇಲ್ಲಾಹಿ" ಎಂಬ ನೂತನ ಮತ ಸಿದ್ಧಾಂತವನ್ನು ರೂಪುಗೊಳಿಸಿದನು. ಆದರೆ ಆ ಮತವು ಹೆಚ್ಚು ಕಾಲ ನಿಲ್ಲಲಾರದೆ ಹೋಯಿತು.





ಮಹಾ ಸಾಮ್ರಾಜ್ಯದ ಅಧಿನೇತನಾದರೂ ಅಕ್ಬರ್ ಅಂತಿಮ ದಶೆಯಲ್ಲಿ ವಿಷಾದ ಸಂಘಟನೆಗಳನ್ನು ಇದಿರಿಸಬೇಕಾಗಿ ಬಂತು. ವ್ಯಾಯುವ್ಯದ ಸರಿಹದ್ದಿನಲ್ಲಿ ಬೀರಬಲ್ ಕೊಲ್ಲಲ್ಪಟ್ಟನು. ಯುವರಾಜ ಸಲೀಂನ ಪ್ರೋದ್ಬಲದಿಂದ ಅಕ್ಬರನ ಆಪ್ತಮಿತ್ರನಾದ ಅಬುಲ್ ಫಜಲ್ ದಾರುಣವಾಗಿ ಕೊಲೆಯಾದನು. ಆ ಇಬ್ಬರ ಮರಣಗಳು ಅಕ್ಬರನಿಗೆ ದೊಡ್ಡ ದುಃಖವನ್ನುಂಟು ಮಾಡಿದುವು.

ಇಂಗ್ಲಂಡನ್ನು ಪರಿಪಾಲಿಸಿದ ಮೊದಲನೇ ಎಲಿಜಬೆತ್ ರಾಣಿಯ ಬಳಿಯಿಂದ ಜಾನ್ ನ್ಯೂಬೆರಿಯ ಮುಖಂಡತ್ವದಲ್ಲಿ ಮೂವರು ಅಧಿಕಾರಿಗಳು ಬಂದು ಅಕ್ಬರನನ್ನು ಕಲೆತುಕೊಂಡರು. ಈ ಮೂವರೇ ಮೊತ್ತಮೊದಲು ಭಾರತ ದೇಶಕ್ಕೆ ಬಂದ ಆಂಗ್ಲೇಯ ಅಧಿಕಾರಿಗಳು.





ಅಕ್ಬರ್ ತುಂಬಾ ಅಭಿಮಾನಿಸಿಕೊಂಡಿದ್ದ ರಾಜಧಾನೀ ನಗರವಾದ ಫತೇಪುರ್ ಸಿಕ್ರೀ ನೀರಿಲ್ಲದ ಕಾರಣದಿಂದ ಬಹಳ ಕಾಲ ಬೆಳಗದೆ ಹೋಯಿತು. ಬ್ರಹ್ಮಾಂಡದಂತಹ ರಾಜ ಪ್ರಾಸಾದಗಳನ್ನು ಅಕ್ಬರನು ಬಿಡಲಾಗದೆ ಬಿಡಬೇಕಾಯಿತು. ಯುವರಾಜ ಸಲೀಂನ ಪ್ರವರ್ತನೆಯಿಂದ ಇನ್ನಿಷ್ಟುನೊಂದು ಹೋದ ಅಕ್ಬರ್ ೧೬೦೫ ನೇ ವರ್ಷದಲ್ಲಿ ಮೃತನಾದನು.



# ಬೂದಿಯಾದ ಭೂತ

ಹಿಂದೆ ಬಾಗ್ದಾದನ್ನು ಪಾಲಿಸಿಕೊಂಡಿದ್ದ ಸುಲ್ತಾನ್ ಹಮಿದನಿಗೆ ಒಬ್ಬನೇ ಕುಮಾರನಿದ್ದನು. ಅವನ ಹೆಸರು ಅಬ್ದುಲ್ ಹಸನ್. ಇವನು ಅತ್ಯಂತ ಸುಂದರನಾಗಿಯೂ, ಒಳ್ಳೆಯ ಧೈರ್ಯಶಾಲಿಯಾಗಿಯೂ ಇದ್ದನು. ಅವನಿಗೆ ಚಿಗುರುಮೀಸೆ ಮೊಳೆತು ಪ್ರಾಯಕ್ಕೆ ಬರುವಾಗ ತಂದೆ ಅವನನ್ನು ಯುವರಾಜನಾಗಿ ಪ್ರಕಟಿಸಬೇಕೆಂದು ನಿಶ್ಚಯಿಸಿ, ಆ ಸಂಗತಿಯನ್ನು ಅಬ್ದುಲ್ ಹಸನ್ನನೊಂದಿಗೆ ಹೇಳಿದನು.

ಅದನ್ನು ಕೇಳಿ ಹಸನ್ ತಂದೆಯೊಂದಿಗೆ, "ಅಪ್ಪಾ, ನಾನು ಯುವರಾಜನಾಗಿ ಪರಿಪಾಲನೆಯ ಹೊಣೆಯನ್ನು ಹೊರುವುದಕ್ಕೆ ಮೊದಲು, ಪ್ರಜೆಗಳ ರೀತಿ ನೀತಿಗಳನ್ನು ತಿಳಿಯಬೇಕೆಂದಿದ್ದೇನೆ. ಅದಕ್ಕಾಗಿ ಒಂದುಸಾರಿ ರಾಜ್ಯದೊಳಗೆ ತಿರುಗಾಡಿ ಅನೇಕ ಪ್ರಾಂತಗಳನ್ನು ನೋಡಿ ಬಂದುಬಿಡುತ್ತೇನೆ" ಎಂದನು.

ಸುಲ್ತಾನನು ಅದಕ್ಕೆ ಒಪ್ಪಿಕೊಂಡು, "ಲೋಕದಲ್ಲಿ ಒಳ್ಳೆಯ ಮನುಷ್ಯರಿರುವ ಹಾಗೆಯೇ ಮೃಗಗಳಂತಹ ದುಷ್ಟ ಮನುಷ್ಯರೂ ಇರುತ್ತಾರೆ, ಮೃಗಗಳು ಎಂಥವೆಂದು ನೋಡಿದ ಕೂಡಲೇ ಗೊತ್ತಾಗುವ ಹಾಗೆ, ಮನುಷ್ಯರು ಎಂಥವರೆಂದು ಗೊತ್ತಾಗುವುದಿಲ್ಲ, ಆದುದರಿಂದ ಈ ಪ್ರಯಾಣದಲ್ಲಿ ನಿನ್ನ ಜತೆಯಾಗಿ, ವಜೀರನನ್ನೂ, ಕೆಲಮಂದಿ ನೌಕರರನ್ನೂ ಕಳುಹಿಸುತ್ತೇನೆ. ನಮ್ಮವರು ನಿನ್ನೊಂದಿಗಿದ್ದರೆ ನಿನಗೇನೂ ಕೆಡುಕಾಗಲಾರದು " ಎಂದನು.

ಆ ಪ್ರಕಾರವೇ ಅಬ್ದುಲ್ ಹಸನ್, ವಜೀರ ಮತ್ತು ಆಯುಧ ಪಾಣಿಗಳಾದ ಹತ್ತುಮಂದಿ ನೌಕರರೊಂದಿಗೆ ಸಂಚಾರ ಹೊರಟನು. ಅವರು ಒಂದು ತಿಂಗಳವರೆಗೆ ರಾಜ್ಯದೊಳಗಿನ ಅನೇಕ ಪ್ರಾಂತಗಳಲ್ಲಿ ತಿರುಗಿ, ಹಿಂದಿರುಗಿ ಬಾಗ್ದಾದಿಗೆ ಪ್ರಯಾಣ ಮಾಡತೊಡಗಿದರು.

ದಾರಿಯಲ್ಲಿ ಅವರಿಗೊಂದು ಗುಡ್ಡ ಗಾಡುಗಳ ಪ್ರಾಂತವು ತಗಲಿತು. ಅಲ್ಲಿ ಬೆಟ್ಟಗಳ ಇಳಿಜಾರಿನ ಸಾನುಭೂಮಿಯಲ್ಲಿ ನೌಕರರು, ಯುವರಾಜನಿಗೆ ಒಂದು ಗುಡಾರ ಎಬ್ಬಿಸಿದರು.

ಅಬ್ದುಲ್ ಹಸನ್ ತನ್ನ ಗುಡಾರದೊಳಗೆ ಪ್ರವೇಶಿಸಲಿರುವಾಗ, ಎಲ್ಲಿಗೋ ಹೋಗಿದ್ದ ವಜೀರನು ಕುದುರೆಯನ್ನು ದೌಡಾಯಿಸುತ್ತಾ ಅಲ್ಲಿಗೆ ಬಂದು, ಕುದುರೆಯಿಂದ ಹಾರಿ ಇಳಿದು, "ಪ್ರಭೂ! ನಿಮಗೆ



ಅಷ್ಟೇನೂ ಪ್ರಯಾಣದ ಬಳಲಿಕೆ ಇಲ್ಲದಿದ್ದರೆ ನನ್ನೊಂದಿಗೆ ಬನ್ನಿ. ಒಂದು ಅತ್ಯದ್ಭುತವಾದ ಜಿಂಕೆಯನ್ನು ತೋರಿಸುತ್ತೇನೆ " ಎಂದನು.

" ಜಿಂಕೆಯೆ ? ಎಷ್ಟು ಜಿಂಕೆ ನೋಡಿದ್ದೇನೆ ! ನೀವು ಹೇಳುವ ಜಿಂಕೆಯಲ್ಲಿ ಅಂಥ ವಿಶೇಷವೇನಿದೆ ?" ಎಂದು ಕೇಳಿದನು ಅಬ್ದುಲ್ ಹಸನ್.

" ನಾನು ಹೇಳುವ ಜಿಂಕೆ ಅಂತಿಂಥದಲ್ಲ. ಈಗ ನೋಡದಿದ್ದರೆ ಜನ್ಮದಲ್ಲೆಂದೂ ಅಂತಹುದನ್ನು ನೋಡಲಾರಿರಿ. ಇದರ ಶರೀರವು ಬಂಗಾರವನ್ನು ಅರೆದು ಹಚ್ಚಿದ ಹಾಗಿದೆ, ಚಕ್ರದಂತಹ ಅದರ ಕಣ್ಣುಗಳು ನಕ್ಷತ್ರಗಳಂತೆ ಹೊಳೆಯುತ್ತವೆ. ಇನ್ನದರ ಗೊರಸುಗಳಂತೂ, ಸಾಣೆ ಹಿಡಿದ ಮಣಿಗಳ ಹಾಗೆ ಜಗಜಗ ಹೊಳೆಯುತ್ತಿವೆ. ಆಹ!" ಎಂದನು ವಜೀರ.

ಹಾಗಾದರೆ ನೋಡೋಣವೆಂದು ಅಬ್ದುಲ್ ಹಸನ್ ಕುದುರೆಯನ್ನೇರಿದನು. ವಜೀರನೂ ಕುದುರೆ ಏರಿ ದಾರಿ ತೋರಿಸುತ್ತಾ ಮುಂದೆ ಸಾಗಿದನು.

ವಜೀರನು ಅವನನ್ನು ಒಂದು ಕಣಿವೆಯ ಪ್ರಾಂತಕ್ಕೆ ಕರೆದುಕೊಂಡು ಹೋದನು. ಅವನು ತೋರಿಸಿದ ಒಂದು ಹಸಿರು ಹುಲ್ಲುಗಾವಲಲ್ಲಿ ವಜೀರನು ವರ್ಣಿಸಿದ ವಿಚಿತ್ರವಾದ ಜಿಂಕೆ ಮೇಯುತ್ತಿರುವುದು ಕಂಡಿತು. ಅಬ್ದುಲ್ ಹಸನ್ ಅದನ್ನು ನೋಡಿ ಅತ್ಯಂತ ಬೆರಗಾಗಿ, "ಆಹಾ ! ಇದು ಕನಸೋ ನಿಜವೋ! ಈ ಜಿಂಕೆ ಇರಬೇಕಾದುದು ಕ್ರೂರಮೃಗಗಳು ತಿರುಗುವ ಈ ಗುಡ್ಡಗಾಡು ಪ್ರಾಂತದಲ್ಲಿ ಅಲ್ಲ, ನಮ್ಮ ಅರಮನೆಯ ಉದ್ಯಾನವನದಲ್ಲಿ!" ಎಂದವನೇ, ಕುದುರೆಯನ್ನು ಅದರ ಕಡೆಗೆ ಓಡಿಸಿ, ಅದನ್ನು ಹಿಡಿಯಲು ಹೊರಟನು. ಆದರೆ ಆ ಜಿಂಕೆಯ ವೇಗವು ಅಸಾಮಾನ್ಯವಾಗಿತ್ತು. ಅದು ಅವನ ಕೈಗೆ ಸಿಕ್ಕದೆ ಅಲ್ಲಿ ಇಲ್ಲಿ ಕಣಿವೆ ಪೂರಾ ತಿರುಗಿಸಿ, ಯಾವ ಕಡೆಗೆ ತಿರುಗಿತೆಂಬುದು ಕೂಡ ತಿಳಿಯದಂತೆ ಕಾಣದೆಯೇ ಹೋಯಿತು.

ಅಬ್ದುಲ್ ಹಸನ್ ಅದನ್ನು ಬಹಳ ಹೊತ್ತು ಹುಡುಕಿದನು. ಪ್ರಯೋಜನವಾಗಲಿಲ್ಲ. ಬಹಳ ನಿರುತ್ಸಾಹದಿಂದ ತನ್ನ ಗುಡಾರದ ಕಡೆಗೆ ಹೊರಟನು. ದಾರಿಯಲ್ಲಿ ಅವನಿಗೊಂದು ಶಿಥಿಲವಾದ ಕೋಟೆ ಕಾಣಿಸಿತು. ಅಲ್ಲಿ ಗೋಡೆಯನ್ನು ಒರಗಿಕೊಂಡು ಒಬ್ಬಳು ಯುವತಿ ದುಃಖಿಸುತ್ತಾ ಕುಳಿತಿರುವುದನ್ನು ನೋಡಿ ಬೆರಗಾದನು. ಅವಳು ವರ್ಣಿಸಲಾಗದಷ್ಟು ಸುಂದರಿಯಾಗಿದ್ದಳು.

ಅಬ್ದುಲ್ ಹಸನ್ ಅವಳ ಬಳಿಗೆ ಹೋಗಿ, " ಏನಿದು ? ಯಾರು ನೀನು ? ಈ ನಿರ್ಜನ ಪ್ರದೇಶದಲ್ಲಿ ಕುಳಿತು ಏಕೆ ದುಃಖಿಸುವೆ ? ಈ ಸ್ಥಳಕ್ಕೆ ಬರುವ ಅಗತ್ಯ ನಿನಗೇನು ಬಂತು ?" ಎಂದು ಕೇಳಿದನು.

ಅವಳು ಅವನನ್ನು ಆಶ್ಚರ್ಯದಿಂದ ನೋಡುತ್ತ, " ಎಷ್ಟು ದಿನಗಳ ಮೇಲೆ ನನ್ನ ಹಾಗಿನ ಮನುಷ್ಯನನ್ನು ನೋಡುತ್ತೇನೆ! ನೀವು ಹೇಗೆ ಇಲ್ಲಿಗೆ ಬಂದಿರೀ ಅಂತ ನನಗೂ ಆಶ್ಚರ್ಯವಾಗುತ್ತದೆ. ನಾನು ಇಲ್ಲಿಗೆ

ಮೂಡುದಿಕ್ಕಿನಲ್ಲಿರುವ ಇರಾನ್ ದೇಶದ ರಾಜ ಕುಮಾರಿ, ಏಳು ದಿನಗಳ ಹಿಂದೆ ನನ್ನ ಗೆಳತಿಯ ರೊಂದಿಗೆ ನದಿಗೆ ಹೋಗಿ ಸ್ನಾನಮಾಡಿ ಮನೆಗೆ ಹಿಂದಿರುಗಿ ಬರುತ್ತಿದ್ದೆ. ಆಗ ಮೇಘದೊಳಗಿನಿಂದ ಒಂದು ಭೂತವು ವಾಯುವೇಗದಿಂದ ಬಂದು ನನ್ನನ್ನು ಕೈಯಿಂದ ಬಾಚಿ ಎತ್ತಿಕೊಂಡು ಮೇಲೆ ಹಾರಿತು. ಅದು ಮೇಘದೊಳಗೆ ಸ್ವಲ್ಪ ದೂರ ಹಾರಿದ ಮೇಲೆ ಹಠಾತ್ತಾಗಿ ಒಂದು ಸಿಡಿಲು ಆದರ ಬೆನ್ನಿಗೆ ಬಡಿಯಿತು. ಮರುಕ್ಷಣದಲ್ಲಿ ಆ ಭೂತ ಭಗ್ಗನೆ ಉರಿದುಹೋಯಿತು. ನಾನು ಇಲ್ಲಿ ಬಂದು ಬಿದ್ದೆ" ಎಂದಳು.

"ಇಂತಹ ಅದ್ಭುತ ಕಥೆಯನ್ನು ಈವರೆಗೂ ಕೇಳ ಲಿಲ್ಲ, ಹೀಗೂ ನಡೆಯುವುದುಂಟೆ?" ಎಂದು ಅಬ್ದುಲ್ ಹಸನ್ ಆಶ್ಚರ್ಯ ವ್ಯಕ್ತಪಡಿಸಿ, "ಅದಿರಲಿ, ಈಗ ನಿನ್ನನ್ನು ಈ ನಿರ್ಜನ ಪ್ರದೇಶದಲ್ಲಿ ಬಿಟ್ಟು ಹೋಗುವುದು ಧರ್ಮವಲ್ಲ. ಕುದುರೆಯ ಮೇಲೆ ನನ್ನ ಹಿಂದೆ ಕುಳಿತುಕೊಳ್ಳಲು ನಿನಗೆ ಅಭ್ಯಂತರವಿಲ್ಲದಿದ್ದರೆ, ನಿನ್ನನ್ನು ನನ್ನ ಗುಡಾರಕ್ಕೆ ಕರೆದುಕೊಂಡು ಹೋಗುತ್ತೇನೆ. ಅಲ್ಲಿಂದ ನಮ್ಮ ಬಾಗ್ದಾದು ನಗರವನ್ನು ಸೇರಬಹುದು. ಆಮೇಲೆ ನಿನ್ನನ್ನು ತಕ್ಕ ರಕ್ಷಣೆಯೊಂದಿಗೆ ನಿನ್ನ ತಂದೆ ತಾಯಿ ಗಳ ಬಳಿಗೆ ಕಳುಹಿಸುತ್ತೇನೆ. ಆಗಬಹುದೆ?" ಎಂದನು.

ಯುವತಿ ಅವನಿಗೆ ತನ್ನ ಕೃತಜ್ಞತೆ ಹೇಳಿಕೊಂಡು ಅಬ್ದುಲ್ ಹಸನ್ನನ ಹಿಂದೆ ಕುದುರೆಯ ಮೇಲೆ ಕುಳಿತಳು. ಆ ಸಮಯದಲ್ಲಿ ಹೊತ್ತು ಮುಳುಗಿ ನಾಲ್ಕು ದಿಕ್ಕುಗಳಲ್ಲಿಯೂ ಕತ್ತಲೆ ಮುಸುಕಿಕೊಂಡು ಬರತೊಡಗಿತು. ಅಬ್ದುಲ್ ಹಸನ್ ತನ್ನ ಗುಡಾರದ ಕಡೆಗೆ ಹೋಗುತ್ತಿದ್ದನು. ದಾರಿಯಲ್ಲಿ ಒಂದು ಕಡೆ ಅವನಿಗೆ ತನ್ನ ಹಿಂದಿನಿಂದ ಯಾರೋ ವಿಕೃತವಾಗಿ ನಕ್ಕ ಶಬ್ದ ಕೇಳಿತು. ಅವನು ಹಿಂದಿರುಗಿ ನೋಡಿದನು. ಈಗ ತನ್ನ ಹಿಂದೆ ಕುದುರೆಯ ಮೇಲೆ ಅದ್ಭುತ



ಸುಂದರ ಯುವತಿಗೆ ಬದಲಾಗಿ ಘೋರ ವಿಕೃತಾ ಕಾರದ ಹೆಣ್ಣು ಭೂತವು ಕುಳಿತಿದ್ದಿತು. ಅಬ್ದುಲ್ ಹಸನ್ನನ ಶರೀರವು ನಡುಗಿತು. ಅವನು ಕುದುರೆಯ ಮೇಲೆ ಒಂದು ಬದಿಗೆ ಸರಿದುಕೊಂಡನು.

ಭೂತವು ಅವನನ್ನು ಸರಿಯಾಗಿ ಕುಳ್ಳಿರಿಸಿ, "ಏಕೆ ಹೀಗೆ ಭಯದಿಂದ ನಡುಗುವಿ? ಏನಾಯಿತು ನಿನಗೆ?" ಎಂದು ಕೇಳಿತು.

"ನಾನೀಗ ಪ್ರಾಣಾಪಾಯದಲ್ಲಿರುವೆನೆಂದು ನಿನಗೆ ಗೊತ್ತಾಗಿದೆಯಷ್ಟೆ?" ಎಂದನು ಅಬ್ದುಲ್ ಹಸನ್.

"ಒಂದು ದೊಡ್ಡ ದೇಶದ ಯುವರಾಜನಿಗೆ ಪ್ರಾಣಭಯವೆ? ಯಾವುದರಿಂದ? ನಿನ್ನ ಸೈನ್ಯಕ್ಕೆ ಆಜ್ಞೆ ಮಾಡಿದರೆ ನಿನ್ನನ್ನು ರಕ್ಷಿಸಲಾರರೆ?" ಎಂದು ಕೇಳಿತು ಭೂತ.

"ಈಗಿನ ಸ್ಥಿತಿಯಲ್ಲಿ ಸೈನ್ಯದಿಂದ ಯಾವ ಪ್ರಯೋಜನವೂ ಇಲ್ಲ" ಎಂದನು ಅಬ್ದುಲ್ ಹಸನ್. "ನಿನಗೆ ಹೇರಳ ಸಂಪತ್ತುಗಳಿವೆಯಷ್ಟೆ?

ಅವುಗಳನ್ನು ಉಪಯೋಗಿಸಿ ಕಷ್ಟದಿಂದ ಪಾರಾಗ ಲಾರೆಯಾ?" ಎಂದಿತು ಭೂತ.

"ಅದರಿಂದಲೂ ಯಾವ ಪ್ರಯೋಜನವೂ ಇಲ್ಲ" ಎಂದನು ಅಬ್ದುಲ್.

"ನಿನ್ನ ಧೈರ್ಯ ಸಾಹಸ ಬಲ ಪರಾಕ್ರಮಗಳು ಎಲ್ಲಿ ಹೋದುವು?" ಎಂದು ಭೂತವು ನಗುತ್ತಾ ಕೇಳಿತು.

"ಅವಾವುದೂ ಈ ಗಂಡಾಂತರದಿಂದ ನನ್ನನ್ನು ಕಾಪಾಡಲಾರವು" ಎಂದನು ಅಬ್ದುಲ್ ಹಸನ್.

"ಹಾಗೇನು? ಹಾಗಾದರೆ ಯಾರು ತಾನೇ ನಿನ್ನನ್ನು ರಕ್ಷಿಸುವರೆಂದುಕೊಳ್ಳುತ್ತೀ? ನಿಜವಾಗಿಯೂ ಅಂಥವರಾರೂ ಇಲ್ಲವೇನು?" ಎಂದು ಭೂತವು ಮತ್ತೆ ನೆಗಾಡಿತು.

ಅಬ್ದುಲ್ ಹಸನ್ ಸ್ವಲ್ಪ ಹೊತ್ತು ಕಣ್ಣು ಮುಚ್ಚಿ ತೆರೆದು, "ಇದ್ದಾನೆ. ದೇವರೊಬ್ಬರೇ ಈಗ ನನ್ನನ್ನು ಕಾಪಾಡುವಂತಹ ಸಮರ್ಥರು!" ಎಂದನು. "ಹಾಗಾದರೆ ಅವನನ್ನೇಕೆ ಕರೆಯುವುದಿಲ್ಲ?" ಎಂದಿತು ಭೂತ. ಕೂಡಲೇ ಅಬ್ದುಲ್ ಹಸನ್ ಕೊರಳೆತ್ತಿ, "ಓ ದೇವರೇ! ನನ್ನನ್ನು ರಕ್ಷಿಸಿ! ರಕ್ಷಿಸಿ!" ಎಂದು ಕೂಗಿದನು. ಮರುಕ್ಷಣದಲ್ಲಿ ಭೂತವು ಕುದುರೆಯ ಮೇಲಿನಿಂದ ಕೆಳಗೆ ಬಿತ್ತು. ಅದು ಬಿದ್ದ ಸ್ಥಳದಲ್ಲಿ ಭಗಭಗನೆ ಉರಿ ಎದ್ದಿತು.

ಮತ್ತೆ ಕೆಲವು ಕ್ಷಣಗಳ ಮೇಲೆ ಆ ಪ್ರದೇಶದಲ್ಲಿ ಒಂದು ಬೂದಿಯ ರಾಶಿ ಮಾತ್ರವೇ ಉಳಿದಿತ್ತು.

ಅದ್ಭುತವಾದ ಜಿಂಕೆ, ಸುಂದರ ಯುವತಿಯಾಗಿ, ಆ ಯುವತಿ ಭೂತವಾಗಿ ಮಾರ್ಪಡಲು ಕಾರಣ, ಅದೊಂದು ಅಮಾನುಷ ಶಕ್ತಿ. ಆ ಕಣಿವೆಯಲ್ಲಿ ಅಂತಹದೊಂದು ದುಷ್ಟ ಶಕ್ತಿ ಇರುವ ಸಂಗತಿ ವಜೀರನಿಗೆ ಗೊತ್ತಿತ್ತು. ಅದಕ್ಕೆ ಯುರಾಜನನ್ನು ಬಲಿಕೊಟ್ಟು ಬಿಟ್ಟರೆ ವಾರಸರಿಲ್ಲದ ರಾಜ್ಯವನ್ನು ತಾನು ವಶಪಡಿಸಿಕೊಳ್ಳಬಹುದೆಂದು ವಜೀರನು ಎಣಿಸಿದ್ದನು. ಆದರೆ ಭೂತವು ಅಬ್ದುಲ್ ಹಸನ್ನನ ಮೇಲೆ ಕನಿಕರಗೊಂಡು, ತನ್ನ ಪ್ರಶ್ನೆಗಳಿಂದ ಅವನು ದೇವರನ್ನು ಕರೆಯುವಂತೆಮಾಡಿ, ತಾನು ಬೂದಿಯಾಗಿ ನಶಿಸಿ, ಅಬ್ದುಲ್ ಹಸನ್ನನ್ನು ಕಾಪಾಡಿತು.

ಅಬ್ದುಲ್ ಹಸನ್ ವೇಗವಾಗಿ ತನ್ನ ಗುಡಾರವಿರುವ ಕಡೆಗೆ ಬಂದನು. ಬದುಕಿ ಬರುವ ಅವನನ್ನು ಅಷ್ಟು ದೂರದಿಂದ ನೋಡಿದ ಕೂಡಲೇ, ದುಷ್ಟನಾದ ವಜೀರ ತನಗೆ ಸಾವು ಬರುವುದೆಂದು ಅಂಜಿ, ಗುಡ್ಡಗಳ ಕಡೆಗೆ ಓಡಿಹೋದನು. ಆಮೇಲೆ ಅವನನ್ನು ಯಾರೂ ನೋಡಲಿಲ್ಲ.

ಈ ಅನುಭವದಿಂದ ಅಬ್ದುಲ್ ಹಸನ್ ಮನುಷ್ಯರ ಸ್ವಭಾವವನ್ನು ಚೆನ್ನಾಗಿ ಅರ್ಥ ಮಾಡಿಕೊಂಡು ಸಂತೋಷದಿಂದ ಬಾಗ್ದಾದ್ ನಗರವನ್ನು ಸೇರಿದನು.





# ಸಾಧುವರ್ತನೆ

ಒಂದುಸಾರಿ ನಿತ್ಯಾನಂದನೆಂಬ ಸಾಧು ದೇಶ ಸಂಚಾರ ಮಾಡುತ್ತ ಕೋಮಲಪುರವೆಂಬ ಊರನ್ನು ಸೇರಿಕೊಂಡನು. ಆಗ ನಡು ಮಧ್ಯಾಹ್ನದ ಸಮಯ ವಾಗಿತ್ತು. ನಿತ್ಯಾನಂದನಿಗೆ ವಿಪರೀತ ಬಾಯಾರಿಕೆ ಯಾಗಿ ನಾಲಗೆ ಅಂಗಳಕ್ಕೆ ಅಂಟಿಕೊಂಡಿತು. ಯಾವ ಜಲಾಶಯವನ್ನೂ ಕಾಣದೆ, ಒಂದು ಮನೆಯ ಬಾಗಿಲು ತಟ್ಟಿದನು. ಗೃಹಿಣಿ ಬಾಗಿಲು ತೆರೆದ ಕೂಡಲೇ ಕುಡಿಯಲು ನೀರು ಬೇಕೆಂದು ಕಷ್ಟದಿಂದ ಕೇಳಿದನು.

ಗೃಹಿಣಿ ಒಳಗೆ ಹೋಗಿ ಒಂದು ತಂಬಿಗೆ ತುಂಬ ನೀರು ತಂದು ನಿತ್ಯಾನಂದನಿಗೆ ಕೊಟ್ಟಳು. ಅದನ್ನು ಕುಡಿದು ಮುಗಿಸಿ, ದಾಹ ತೀರದೆ ಇನ್ನಿಷ್ಟು ನೀರು ಬೇಕೆಂದು ಕೇಳಿದನು.

ಗೃಹಿಣಿ ಮತ್ತೊಂದು ತಂಬಿಗೆ ನೀರು ತಂದು ಕೊಟ್ಟಳು. ಅದನ್ನು ಸಹಾ ಕುಡಿದ ಮೇಲೆ ನಿತ್ಯಾನಂದನಿಗೆ ದಾಹ ತಣಿಯಿತು. ಅವನು ಆ ಗೃಹಿಣಿಗೆ ಆಶೀರ್ವಾದ ಮಾಡಿ, ಅಲ್ಲಿಂದ ಮುಂದೆ ಹೋಗಿ ಕೆರೆಗಟ್ಟೆಯ ಅರಳಿ ಮರದ ಕೆಳಗೆ ಕುಳಿತು ಕೊಂಡನು.

ಕೆರೆಯಲ್ಲಿ ನೀರಿನ ಪಸೆಯೇ ಇರಲಿಲ್ಲ. ತಳದ ನೆಲವು ಒಣಗಿ ಬಿರುಕುಬಿಟ್ಟಿತ್ತು. ಅರಳಿ ಮರದ ಎಲೆಗಳು ಕೂಡಾ ವಿರಳವಾಗಿ ತಮ್ಮ ಹಚ್ಚದನ ವನ್ನು ಕಳೆದುಕೊಂಡಿದ್ದುವು. ನೆಲದಲ್ಲಿ ತುಂಬಾ ಗಾಳಿಗೆ ಉದುರಿದ ಎಲೆಗಳು ಒಣಗಿ ದರಲೆ ಯಾಗಿದ್ದುವು. ಬೀಸುವ ಗಾಳಿಗೆ ಕೆಳಗೆ ಬಿದ್ದ ದರಲೆಗಳು ಅತ್ತಿತ್ತ ಹಾರುತ್ತಿದ್ದುವು. ಕೆರೆ ಪೂರಾ ದರಲೆಗಳಿಂದ ತುಂಬಿ ಹೋಗಿತ್ತು.

ದೇಶ ಸಂಚಾರಕ್ಕೆ ಹೊರಟ ಮೇಲೆ ಅಂದಿನ ವರೆಗೂ ನಿತ್ಯಾನಂದನಿಗೆ ಪ್ರತಿ ಗ್ರಾಮವಾಸಿಗಳೂ ಬಹಳ ಆದರಣೆಯನ್ನು ತೋರಿಸಿ ಗೌರವಿಸಿ ಆತಿಥ್ಯ ವಿತ್ತಿದ್ದರು. ಕೋಮಲಪುರದಲ್ಲಿ ಕೂಡಾ ತಪ್ಪದೆ ಅಂತಹ ಆತಿಥ್ಯವೇ ದೊರಕುವುದೆಂಬ ನಂಬಿಕೆ ಯಲ್ಲಿದ್ದನು. ಆದರೆ ಗ್ರಾಮಸ್ಥರು ಅವನನ್ನು ನೋಡಿದರೂ ಸಹ, ತಮ್ಮ ಮನೆಗೆ ಕರೆಯಲಿಲ್ಲ. ಮಾತಾಡಿಸಲೂ ಇಲ್ಲ. ಸಾಮಾನ್ಯ ಮನುಷ್ಯನನ್ನು ನೋಡಿದಂತೆಯೇ ವರ್ತಿಸುತ್ತಿದ್ದರು.

ನಿತ್ಯಾನಂದನು ಆ ದಿನ ರಾತ್ರಿ ತನ್ನೊಂದಿಗಿದ್ದ ಹಣ್ಣುಗಳಿಂದ ಹಸಿವೆ ತೀರಿಸಿಕೊಂಡು, ಎಲ್ಲಿಯೋ

ರಾಂಬಾಬು



ಮಲಗಿ ಬೆಳಗಾದ ಕೂಡಲೇ, ಸ್ವಲ್ಪ ದೂರ ಗುಡ್ಡದಾಚೆಗಿರುವ ಕಾಂಚನಪುರವೆಂಬ ಊರಿಗೆ ಹೊರಟನು.

ಹೋಗುವ ದಾರಿಯಲ್ಲಿ ಚಿದಾನಂದನೆಂಬ ಸಾಧು ಇದಿರಾಗಿ ಬರುತ್ತ ಅವನನ್ನು ಸಂಧಿಸಿದನು.

ಇಬ್ಬರೂ ಒಬ್ಬರನ್ನೊಬ್ಬರು ಮಾತಾಡಿಸಿ ಪರಿಚಯಮಾಡಿಕೊಂಡರು. ಚಿದಾನಂದನು ಕೋಮಲಪುರಕ್ಕೆ ಹೋಗುವವನೆಂದು ತಿಳಿದು, ನಿತ್ಯಾನಂದನು ಅವನನ್ನು ನೋಡಿ ಹೀಗೆಂದನು :

"ನೀವು ಆ ಗ್ರಾಮಕ್ಕೆ ಹೋದರೆ ಬಹಳ ತೊಂದರೆಗೆ ಬೀಳುವಿರಿ. ಅಲ್ಲಿಯ ಜನರಿಗೆ ನಮ್ಮಂಥಹ ಸಾಧು ಸನ್ಯಾಸಿಗಳ ಮೇಲೆ ಸ್ವಲ್ಪವೂ ಗೌರವವಿಲ್ಲ; ಆದರಣೆಯೂ ದೊರಕದು. ಅಲ್ಲಿಗೆ ಹೋದರೆ ನೀವು ಬಹಳ ಕಷ್ಟಕ್ಕೆ ಬೀಳಬೇಕಾಗಿ ಬರುತ್ತದೆ. ಯಾರೂ ತಾವಾಗಿ ನಿಮ್ಮನ್ನು ಆಹ್ವಾನಿಸಲಾರರು. ನನ್ನ ಅನುಭವದಿಂದ ಹೇಳುತ್ತೇನೆ".

ನಿತ್ಯಾನಂದನು ಹೇಳಿದುದನ್ನು ಕೇಳಿ, ಚಿದಾನಂದನು, "ನಮ್ಮಂಥವರು ಅಂತಹ ಅನುಭವ ಪಡೆಯುವುದರಿಂದ ತಪ್ಪೇನೂ ಇಲ್ಲ." ಎಂದು ಹೇಳಿ, ತನ್ನ ಪ್ರಯಾಣವನ್ನು ಮುಂದುವರಿಸಿ ಕೋಮಲಪುರಕ್ಕೆ ಹೋದನು. ಅವನು ಯಾವ ಕಷ್ಟಗಳಿಗೂ ತೊಂದರೆಗಳಿಗೂ ಒಳಗಾಗದೆ ಅಲ್ಲಿ ಏಳು ದಿನಗಳವರೆಗೂ ಇದ್ದನು. ಆಮೇಲೆ ಅಲ್ಲಿಂದ ಕಾಂಚನಪುರಕ್ಕೆ ಹಿಂದಿರುಗಿದನು.

ಅಲ್ಲಿ ಒಂದು ದಿನ ಬೆಳಂಜಾವದಲ್ಲಿ ಇಬ್ಬರು ಸಾಧುಗಳೂ ಕೆರೆಯಲ್ಲಿ ಸ್ನಾನಕ್ಕೆ ಬಂದು ಒಬ್ಬರನ್ನೊಬ್ಬರು ನೋಡಿ ಮಾತಾಡಿಕೊಂಡರು.

"ಆ ದಿನ ನನ್ನ ಮಾತು ಕೇಳದೆ ನೀವು ಕೋಮಲಪುರಕ್ಕೆ ಹೋದಿರಪ್ಪೆ? ಇಷ್ಟು ದಿನ ಹೇಗೆ ಅಲ್ಲಿದ್ದಿರಿ? ನಿಮ್ಮ ತಾಳ್ಮೆ ದೊಡ್ಡದೇ! ಅಲ್ಲಿ ಆತಿಥ್ಯವೇನೂ ದೊರಕದೆ ನೀವು ಬಹಳ ಕಷ್ಟಕ್ಕೆ ಗುರಿಯಾಗಿರಬಹುದು. ಸಹಿಸಿಕೊಂಡಿರಿ ಅಲ್ಲವೆ?" ಎಂದು ನಿತ್ಯಾನಂದನು ಆಶ್ಚರ್ಯದಿಂದ ಚಿದಾನಂದನನ್ನು ಕೇಳಿದನು.

"ಹಾಗೇನೂ ಆಗಲಿಲ್ಲ ಬಿಡಿ. ಗ್ರಾಮಸ್ಥರು ನನಗೆ ಬಹಳ ಚೆನ್ನಾಗಿ ಆತಿಥ್ಯ ಕೊಟ್ಟರು. ಅವರು ನನ್ನ ಮೇಲೆ ತೋರಿಸಿದ ಆದರಣೆಯನ್ನು ನಾನೆಂದೂ ಮರೆಯಲಾರೆ!" ಎಂದನು ಚಿದಾನಂದ.

"ಹಾಗೇನು! ಹಾಗಾದರೆ ನಾನು ಮಾತ್ರ ಏನೋ ಪಾಪಮಾಡಿರಬೇಕು!" ಎಂದು ನಿತ್ಯಾನಂದನು ಆಶ್ಚರ್ಯಪಟ್ಟನು.

"ಕೋಮಲಪುರಕ್ಕೆ ಹೋಗಬೇಕಾದರೆ ಆ ಊರಿನ ಕೆರೆಗಟ್ಟೆಯ ಮೇಲಿಂದಾಗಿಯೇ ಹೋಗಬೇಕಪ್ಪ? ಕೆರೆ ಪೂರ್ತಿ ಒಣಗಿರುವುದನ್ನು ನೀವು ಕೂಡಾ ನೋಡಿದ್ದೀರಿ ಹೌದಾ? ಆಗ ನಿಮಗೆ ಯಾವ ವಿಚಾರವೂ ಹೊಳೆಯಲಿಲ್ಲವೆ?" ಎಂದು ಕೇಳಿದನು ಚಿದಾನಂದ.

"ಹೌದು, ನೋಡಿದ್ದೇನೆ. ಅದಕ್ಕೂ ನನಗೆ ಗ್ರಾಮಸ್ಥರು ಆತಿಥ್ಯ ನೀಡದೆ ಹೋಗುವುದಕ್ಕೂ ಏನು ಸಂಬಂಧ ?" ಎಂದನು ನಿತ್ಯಾನಂದ.

"ಬಹಳ ಮುಖ್ಯವಾದ ಸಂಬಂಧವೇ ಇದೆ. ಆ ಒಣಗಿ ಹೋದ ಕೆರೆಯನ್ನು ನೋಡಿದ ಕೂಡಲೇ ಗ್ರಾಮಸ್ಥರು ಕುಡಿಯಲು ನೀರಿಲ್ಲದೆ ಬಹಳ ಕಷ್ಟ ಪಡುತ್ತಿದ್ದಾರೆಂಬುದನ್ನು ನೀವು ತಿಳಿಯಬೇಕಿತ್ತು. ಅದನ್ನು ಬಿಟ್ಟು ಗ್ರಾಮದೊಳಗೆ ಪ್ರವೇಶಿಸಿದ ಕೂಡಲೇ ನೀರು ಕೇಳಿ ಕುಡಿದಿದ್ದೀರಿ. ಒಂದಲ್ಲ, ಎರಡು ತಂಬಿಗೆ!" ಎಂದನು ಚಿದಾನಂದ.

"ಮತ್ತೇನು ಮಾಡಲಿ ? ನನ್ನ ಸ್ಥಿತಿ ಹಾಗಿತ್ತು. ಬಹಳ ದೂರದಿಂದ ನಡೆದು ನಾಲಗೆ ಅಂಟಿಕೊಂಡಿತ್ತು. ನಾನಾಗಿ ನೀರು ಕೇಳದಿದ್ದರೆ ಸಾಯುತ್ತಿದ್ದೆ" ಎಂದನು ನಿತ್ಯಾನಂದ.

"ಅದು ನಿಜಾ ಅನ್ನಿ. ಆದರೆ ಆ ಊರಿನವರಿಗೆ ಬಹಳ ಕಾಲದಿಂದ ನೀರಿನ ಕೊರತೆ ಬಂದಿತ್ತು. ಕುಡಿಯುವ ನೀರು ತರಲು ಎಲ್ಲೆಲ್ಲೋ ಹೋಗಿ ಹುಡುಕಬೇಕಾಗಿತ್ತು. ನಮ್ಮಂಥ ಸಾಧು ಸನ್ಯಾಸಿಗಳೆಂದರೆ ಯಾರಿಗಾದರೂ ಭಕ್ತಿ, ಗೌರವಗಳು ಬರಲು ಕಾರಣ, ನಾವು ಅವರ ಕಷ್ಟಗಳನ್ನು ತೀರಿಸಲು ಏನಾದರೂ ದಾರಿ ತೋರಿಸುವೆವೆಂತಲೇ. ಅಷ್ಟೇ ಅಲ್ಲದೆ ನಾವು ಅವರ ಮೇಲೆ ದೊಡ್ಡ ಅಧಿಕಾರಿಗಳೇನೂ ಅಲ್ಲವಷ್ಟೆ?" ಎಂದನು ಚಿದಾನಂದ.

"ಅದೆಲ್ಲಾ ಸರಿಯೇ. ನೀವು ಅವರಿಗೆ ಹಾಗೇನು ದಾರಿ ತೋರಿಸಿದಿರಿ ? ನಿಮಗೆ ಅಷ್ಟು ಆದರಣೆ ತೋರಿಸಲು ಏನಾಯಿತು?" ಎಂದು ನಿತ್ಯಾನಂದನು ಕುತೂಹಲದಿಂದ ಕೇಳಿದನು.

"ನನ್ನ ದೊಡ್ಡ ಕಮಂಡಲುವಿನಲ್ಲಿ ಎರಡು ಮೂರು ದಿನಗಳಿಗೆ ಸಾಕಾಗುವಷ್ಟು ನೀರು ತುಂಬಿಸಿಕೊಂಡೇ ಅಲ್ಲಿಗೆ ಹೋಗಿದ್ದೆನು. ಅದಕ್ಕೆ ಮೊದಲು ಕೆಲವು ದಿನಗಳವರೆಗೆ ಕೋಮಲಪುರದ ಸಮೀಪವಿದ್ದ ಗುಡ್ಡ ಪ್ರದೇಶದಲ್ಲಿ ತಿರುಗಿ, ಕಲ್ಲುಗಳ ಮರೆಯಲ್ಲಿದ್ದ ನೀರ ಒರತೆಯನ್ನು ಕಂಡುಹಿಡಿದಿದ್ದೆ. ಆ ಸಂಗತಿಯನ್ನು ಗ್ರಾಮಸ್ಥರಿಗೆ ಹೇಳಿದೆನು. ಅವರೀಗ ಆ ಒರತೆಯ ಧಾರೆಯಿಂದ ಚಿಕ್ಕ ಕಾಲುವೆ ತೋಡಿ, ಒಣಗಿಹೋದ ತಮ್ಮ ಕೆರೆಯನ್ನು ನೀರಿನಿಂದ ತುಂಬಿಸಿಕೊಂಡರು." ಎಂದನು ಚಿದಾನಂದ ಉತ್ಸಾಹದಿಂದ.

ನಿತ್ಯಾನಂದನು ತಲೆಬಾಗಿ ಚಿದಾನಂದನಿಗೆ ನಮಸ್ಕಾರಮಾಡಿ, "ಬಹಳ ಕಾಲದಿಂದ ದೇಶಾಟನೆ ಮಾಡುವ ನನಗೆ, ನಿಮ್ಮ ಪರಿಚಯದ ಕಾರಣದಿಂದ ಸಾಧುಗಳ ವರ್ತನೆ ಹೇಗಿರಬೇಕೆಂಬುದು ಈಗ ಗೊತ್ತಾಯಿತು. ನಾವು ಸರ್ವಸಂಗ ತ್ಯಜಿಸಿದರೂ ಜನ ಸಂಪರ್ಕ ತ್ಯಜಿಸಿಲ್ಲ" ಎಂದನು.





# ಅತ್ತೆ ಸೊಸೆಯರು

ರಂಗಪುರವೆಂಬಲ್ಲಿ ಸೀತಾಪತಿ ಮತ್ತು ಅನಸೂಯಾ ಎಂಬ ದಂಪತಿಗಳಿಗೆ ಗಿರಿಧರ ಮತ್ತು ನಾರಾಯಣ ಎಂಬ ಇಬ್ಬರು ಮಕ್ಕಳು. ಗಿರಿಧರನಿಗೆ ರಂಗಪುರದಲ್ಲಿಯೇ ಒಬ್ಬ ಸಾಹುಕಾರನ ಹತ್ತಿರ ಉದ್ಯೋಗ ದೊರಕಿತು. ನಾರಾಯಣನಿಗೆ ನಗರದೊಳಗೆ ಒಂದು ನಾಟಕ ಶಾಲೆಯಲ್ಲಿ ಗಾಯಕನಾಗಿಯೂ ನಟನಾಗಿಯೂ ದೊಡ್ಡ ಸಂಬಳದ ಮೇಲೆ ಕೆಲಸ ದೊರಕಿ, ಅಲ್ಲಿಯೇ ಸ್ಥಿರವಾಗಿ ಇರತೊಡಗಿದನು.

ಗಿರಿಧರನಿಗೆ ಸುಮತಿಯೊಂದಿಗೂ, ನಾರಾಯಣನಿಗೆ ಲಕ್ಷ್ಮಿಯೊಂದಿಗೂ ಮದುವೆಯಾಯಿತು. ಅವರಿಬ್ಬರೂ ಸಾಮಾನ್ಯ ಕುಟುಂಬದ ಹುಡುಗಿಯರಾಗಿದ್ದರು. ಹೀಗೆ ಇಬ್ಬರು ಮಗಂದಿರಿಗೆ ಮದುವೆ ಮಾಡಿದ ಮೇಲೆ ತಮ್ಮ ಮುಖ್ಯ ಬಾಧ್ಯತೆ ತೀರಿದಂತೆ ಅನಸೂಯಾ ಸೀತಾಪತಿಯರಿಗೆ ಹಗುರೆನಿಸಿತು. ಸ್ವಲ್ಪ ಕಾಲ ಅವರು ಗಿರಿಧರನ ಮನೆಯಲ್ಲಿ, ಸ್ವಲ್ಪ ಕಾಲ ನಾರಾಯಣನ ಮನೆಯಲ್ಲಿ ಇರುತ್ತಾ ಬಂದರು.

ಅವರು ಗಿರಿಧರನ ಮನೆಯಲ್ಲಿರುವಾಗ, ಒಂದು ದಿನ ನಗರದಲ್ಲಿರುವ ನಾರಾಯಣನಿಗೆ ಜ್ವರ ಬಂದಿರುವುದೆಂದು ಸಮಾಚಾರ ತಿಳಿಯಿತು.

ಅದನ್ನು ಕೇಳಿದ ಕೂಡಲೇ ಅನಸೂಯೆ ಸೊಸೆ ಸುಮತಿಯೊಂದಿಗೆ, "ಅದೇನೋ ಪಾಪ, ನಾರಾಯಣನಿಗೆ ನಗರದ ಗಾಳಿ ಹಿಡಿಸುವುದಿಲ್ಲವೋ ಏನೋ ? ಆಗಾಗ ಹೀಗೆಯೇ ಅವನ ಆರೋಗ್ಯ ಕೆಡುತ್ತಾ ಬರುತ್ತದೆ. ಇಂಥಾದ್ದೆಲ್ಲಾ ಬಂದರೆ ತಡೆದುಕೊಳ್ಳುವುದರಲ್ಲಿ ದೊಡ್ಡವ ಗಿರಿಧರ ಬಲು ಗಟ್ಟಿಗ. ಧೈರ್ಯವೂ ಗಿರಿಧರನಿಗೆ ಹೆಚ್ಚು. ಯಾವುದಕ್ಕೂ ನಾನೊಮ್ಮೆ ಹೋಗಿ, ಹತ್ತಿರವಿದ್ದು ನೋಡಿಕೊಂಡು ಧೈರ್ಯ ಹೇಳಿ ಅವನಿಗೆ ಗುಣವಾಗುವವರೆಗೂ ಇದ್ದು ಬರುತ್ತೇನೆ." ಎಂದು ಹೇಳಿ ನಗರಕ್ಕೆ ಹೊರಟು ಹೋದಳು.

ಆ ದಿನ ರಾತ್ರಿ ಸುಮತಿ ತನ್ನ ಗಂಡ ಗಿರಿಧರನೊಂದಿಗೆ, "ನೋಡಿದಿರಾ, ನಿಮ್ಮ ಅಮ್ಮನ ಪಕ್ಷಪಾತ ಬುದ್ಧಿ ಹೇಗಿದೆ ಅಂತ? ನಿಮ್ಮ ತಮ್ಮ ಧಂಡಿಯಾಗಿ ಸಂಪಾದಿಸುವವನಾದ್ದರಿಂದ ತಾನೇ ಅವನ ಮೇಲೆ ಅಷ್ಟೊಂದು ಅಭಿಮಾನ? ಒಂದು ಸಣ್ಣ ಜ್ವರ ಬಂತು ಅಂತ ಸುದ್ದಿ ಬಂದದ್ದೇ ತಡ, ಅಲ್ಲಿಗೆ ಓಡಿದರು, ನಿಮ್ಮ ಮೇಲೆ ಅಷ್ಟು ಅಭಿಮಾನವಿದೆಯೇ ಅತ್ತೆಗೆ ? ಮೊದಲು ಅವರೂ ಮಾವಯ್ಯನೂ ನಿಮ್ಮ ತಮ್ಮನ

ವಿ. ಆರ್. ಎಸ್. ನಾರಾಯಣ

ಮನೆಯಲ್ಲಿರುವಾಗ ನಿಮಗೆ ಜ್ವರ ಬಂತಷ್ಟೆ? ಆ ಸಂಗತಿ ತಿಳಿದೂ ಅವರು ನಿಮ್ಮನ್ನು ನೋಡಲಿಕ್ಕೆ ಬರಲಿಲ್ಲ" ಎಂದಳು.

ಗಿರಿಧರನು ಅದಕ್ಕೇನೂ ಉತ್ತರ ಕೊಡದೆ ಸುಮ್ಮನೆ ಹೂಂ ಹೂಂ ಎಂದು ತಲೆ ಮಾತ್ರ ಆಡಿಸಿದನು.

ಹದಿನೈದು ದಿನಗಳ ಮೇಲೆ ಅನಸೂಯೆ ನಗರದಿಂದ ಹಿಂದಿರುಗಿ ಬಂದು, ಸೊಸೆಯೊಂದಿಗೆ, "ಸುಮತೀ, ಅಂದುಕೊಂಡ ಹಾಗೆ ನಾರಾಯಣ ಮೂರು ದಿನ ಬಂದ ಜ್ವರಕ್ಕೇ ಹೆದರಿ ಕಂಗಾಲಾಗಿಬಿಟ್ಟ. ಲಕ್ಷ್ಮಿ ಅವನಿಗಿಂತ ಮೇಲೆ ಹೆದರುವವಳು. ನಾನು ಹತ್ತಿರವಿದ್ದು ಹೊತ್ತು ಹೊತ್ತಿಗೆ ಮದ್ದು ಕುಡಿಸಿ ಧೈರ್ಯ ಹೇಳಿದೆ. ಪೂರ್ತಿ ಗುಣವಾಗುವವರೆಗೂ ಇದ್ದು ಬಂದೆನಮ್ಮ." ಎಂದಳು.

ಸುಮತಿ ತನಗೆ ಬಂದ ಕೋಪವನ್ನು ಹೊರಗೆ ತೋರಗೊಡದೆ, "ಒಳ್ಳೇ ಕೆಲಸಮಾಡಿ ಬಂದಿರಿ ಅತ್ತೇ" ಎಂದಳು.

ಆ ಮೇಲೆ ಎಂಟು ದಿನಗಳ ತರುವಾಯ ಅನಸೂಯೆಯ ತಮ್ಮ ಅರವಿಂದನೆಂಬವನು ರಂಗಪುರಕ್ಕೆ ಬಂದನು. ಅವನು ದೂರದ ಒಂದು ಕುಗ್ರಾಮದಲ್ಲಿ ಚಿಕ್ಕ ವ್ಯವಸಾಯಗಾರನಾಗಿದ್ದನು. ನಾಲ್ಕೈದು ವರ್ಷಗಳ ಹಿಂದೆ, ಸರಿಯಾಗಿ ಎರಡು ವರ್ಷ ಮಳೆಯೇ ಬಾರದೆ ಅವನ ಬೆಳೆ ಪೂರಾ ಒಣಗಿ ಹಾಳಾಯಿತು. ಅನಸೂಯೆ ತನ್ನ ಬಂಗಾರದ ನಗಗಳನ್ನು ಮಾರಿ ನಾಲ್ಕು ಸಾವಿರ ರೂಪಾಯಿಗಳನ್ನು ಕೊಡಿಸಿ ತಮ್ಮನಿಗೆ ಸಹಾಯಮಾಡಿದ್ದಳು.

ಈ ಸಾರಿ ಅರವಿಂದನು ಬಂದು ಆ ಹಣದ ಮೊತ್ತವನ್ನು ಅನಸೂಯೆಗೆ ಕೊಟ್ಟು, "ಅಕ್ಕಾ, ನೀನು ಕೊಟ್ಟ ನಾಲ್ಕು ಸಾವಿರದಿಂದ ಮತ್ತೆ ವ್ಯವಸಾಯದಲ್ಲಿ ನಾನು ಮೇಲೆ ಬರಲಿಕ್ಕೆ ತುಂಬಾ ಸಹಾಯವಾಯಿತು. ಈಗ ನನಗೇನೂ ಕಷ್ಟವಿಲ್ಲ. ಪೈರುಗಳೆಲ್ಲ ಚೆನ್ನಾಗಿವೆ. ಕಷ್ಟದ ದಿನಗಳು ಹೋದುವು." ಎಂದು ಹೇಳಿ ಎರಡು ದಿನಗಳಿದ್ದು ಹೊರಟು ಹೋದನು.



ತಮ್ಮನು ಹೋದ ಮೇಲೆ ಅನಸೂಯತ್ತೆ, ಸುಮತಿಯನ್ನು ಕರೆದು, "ಇಕೋಮ್ಮ. ಈ ವಯಸ್ಸಿನಲ್ಲಿ ನಾನು ನಗನಟ್ಟು ಏಕೆ ಮಾಡಿಸಿಕೊಳ್ಳಲಿ ? ದೊಡ್ಡವನು ನಗರದಲ್ಲಿ ಕೈ ತುಂಬಾ ಸಂಪಾದಿಸಿಕೊಂಡಿದ್ದಾನೆ. ಅವನಿಗೆ ಯಾವ ಕೊರತೆಯೂ ಇಲ್ಲ. ಅವನೊಂದಿಗೆ ಹೋಲಿಸಿದರೆ ಗಿರಿಧರನ ಸಂಪಾದನೆ ಬಹಳ ಕಡಿಮೆ. ಅರವಿಂದನು ಕೊಟ್ಟು ಹೋದ ಈ ನಾಲ್ಕು ಸಾವಿರ ನೀನೇ ತೆಗೆದುಕೋ. ನಿನಗೆ ಬೇಕಾದ ನಗ ಮಾಡಿಸಿಕೋ" ಎಂದು ಆ ಹಣದ ಗಂಟನ್ನು ಸುಮತಿಗೆ ಕೊಟ್ಟಳು.

ಅತ್ತೆಯ ಒಳ್ಳೆಯ ಮನಸ್ಸನ್ನೂ ಪ್ರೀತಿಯನ್ನೂ ನೋಡಿ ಸುಮತಿಯ ಕಣ್ಣುಗಳು ಆನಂದಬಾಷ್ಪದಿಂದ ತುಂಬಿದುವು. ಅದು ಕೆಳಗೆ ಬೊಟ್ಟು ಬೊಟ್ಟಾಗಿ ಬೀಳುತ್ತಿರಲು ಅತ್ತೆಯ ಪಾದಗಳಿಗೆ ನಮಸ್ಕಾರ ಮಾಡಿದಳು.

ಆ ರಾತ್ರಿ ಹೆಂಡತಿಯಿಂದ ಈ ಸಂಗತಿಯನ್ನು ತಿಳಿದುಕೊಂಡ ಗಿರಿಧರನು, "ಸುಮತೀ, ಅಮ್ಮ ನಾರಾಯಣನನ್ನು ನೋಡಲು ಹೋದಾಗ ನೀನು ಹೇಳಿದ ಮಾತುಗಳು ನೆನಪಿವೆಯೆ ? ಅವಳಿಗೆ ಪಕ್ಷಪಾತದ ಬುದ್ಧಿ ಎಂದು ಹೇಳಿದ್ದೀ. ಆಗ ನಾನೇನೂ ಮಾತಾಡಿ ಪ್ರಯೋಜನವಿಲ್ಲವೆಂದುಕೊಂಡು ಸುಮ್ಮನಿದ್ದೆನು. ಅಮ್ಮನಿಗೆ ನಾನೂ ನಾರಾಯಣನೂ ಒಂದೇ. ಯಾರು ಯಾವುದರಲ್ಲಿ ಕಡಿಮೆಯಾಗಿರುವರೋ ಅವರಿಗೆ ತನ್ನಿಂದಾದಷ್ಟು ಸಹಾಯಮಾಡುತ್ತಾಳೆ. ನಾನು ಎಂಥವನೆಂಬುದು ಅಮ್ಮನಿಗೆ ಚೆನ್ನಾಗಿ ಗೊತ್ತಿದೆ. ನನ್ನ ಆರೋಗ್ಯವನ್ನು ಕುರಿತು ಆಕೆಗೆ ಯಾವ ಚಿಂತೆಯೂ ಇಲ್ಲ. ಆದರೆ ಸಂಪಾದನೆಯಲ್ಲಿ ನನಗೆ ಅವನಿಗಿಂತ ಕಡಿಮೆ ಎಂಬುದು ಅಮ್ಮನನ್ನು ನೋಯಿಸುತ್ತಿದೆ." ಎಂದನು.

ಸುಮತಿ ಮುಖವನ್ನು ಬಾಡಿಸಿಕೊಂಡು, "ನಿಮ್ಮ ಮಾತು ನಿಜವೇ ಅಂದ್ರೆ! ಅತ್ತೆಯ ಮನಸ್ಸು ಎಂತಹುದೆಂದು ತಿಳಿಯಲು ನನಗೆ ಇಷ್ಟು ದಿನ ಹಿಡಿಯಿತು. ನಮ್ಮ ಸಂಪಾದನೆ ಕಡಿಮೆಯಾದರೂ ಹಳ್ಳಿಯಲ್ಲಿರುವವರಾದುದರಿಂದ ಕಷ್ಟವೇನೂ ಗೊತ್ತಾಗುವುದಿಲ್ಲ. ನಗರದಲ್ಲಿ ಎಷ್ಟು ಸಂಪಾದಿಸಿದರೂ ಖರ್ಚುಗಳು ಹೆಚ್ಚೇ. ಅತ್ತೆಯವರು ನಮಗೆ ಕೊಟ್ಟ ಈ ನಾಲ್ಕು ಸಾವಿರದಲ್ಲಿ ಅರ್ಧವನ್ನು ಲಕ್ಷ್ಮಿಗೂ ಕೊಟ್ಟರೆ, ಮೈದುನನಿಗೂ ಸಂತೋಷವಾದೀತು, ಅಲ್ಲವೆ ? " ಎಂದಳು.

ತನ್ನ ಹೆಂಡತಿಯಲ್ಲಿ ಬಂದ ಬದಲಾವಣೆಯನ್ನು ನೋಡಿ ಗಿರಿಧರನಿಗೆ ಬಹಳ ಸಂತೋಷವಾಯಿತು.

"ಕೊಟ್ಟು ನೋಡಿದರಾಯಿತು. ನೀನೇ ಹೋಗಿ ಕೊಟ್ಟು ಬಾ. ಲಕ್ಷ್ಮಿ ತೆಗೆದುಕೊಂಡರೆ ನನಗೂ ಸಂತೋಷವಾದ ಹಾಗಾಗುತ್ತದೆ" ಎಂದನು ಗಿರಿಧರ.





# ಯಾರಿಗೆಯಾವುದು?

ಧಾರಾ ನಗರದಲ್ಲಿ ವಜ್ರಚಿತ್ರನೆಂಬ ಒಬ್ಬ ಧನಿಕನಿದ್ದನು. ಅತನಿಗೆ ನೂರು ಎಕರೆ ಹೊಲ ಗದ್ದೆಗಳಿದ್ದುವು. ಅದರ ಮೇಲೆ ದೊಡ್ಡ ನಗಗಳ ವ್ಯಾಪಾರವೂ ಇದ್ದಿತು. ಅವನಿಗೆ ಇಬ್ಬರು ಕುಮಾರರಿದ್ದರು. ಒಬ್ಬನ ಹೆಸರು ಶ್ರೀಮುಖಿ. ಎರಡನೆಯವನ ಹೆಸರು ಬಹುಮುಖಿ. ವಜ್ರಚಿತ್ರನು ಈ ಮಕ್ಕಳ ಸಹಾಯದಿಂದ ಅತ್ತ ವ್ಯಾಪಾರವನ್ನೂ, ಇತ್ತ ವ್ಯವಸಾಯವನ್ನೂ ಚೆನ್ನಾಗಿ ಅಭಿವೃದ್ಧಿ ಪಡಿಸುತ್ತಾ ಬಂದನು. ನಾಲ್ಕೈದು ತಲೆಮಾರಿನವರೆಗೆ ಕುಳಿತು ತಿಂದರೂ ಕರಗದಷ್ಟು ಆಸ್ತಿ ಸೇರಿದ ಮೇಲೆ ವಜ್ರಚಿತ್ರನ ಮನಸ್ಸು ಪಾರಮಾರ್ಥಿಕದ ಕಡೆಗೆ ತಿರುಗಿತು. ಕಾಶಿಗೆ ಹೋಗಿ ಪರಮಶಿವನ ಧ್ಯಾನದಲ್ಲಿದ್ದುಕೊಂಡು ಉಳಿದ ಜೀವಿತವನ್ನು ಕಳೆಯಬೇಕೆಂದು ನಿಶ್ಚಯಿಸಿದನು.

ಒಂದು ದಿನ ವಜ್ರಚಿತ್ರನು ತನ್ನ ಇಬ್ಬರು ಮಗಂದಿರನ್ನೂ ಕರೆದು ತನ್ನ ನಿರ್ಣಯವನ್ನು ತಿಳಿಸಿದನು. ಶ್ರೀಮುಖಿನಿಗೂ, ಬಹುಮುಖಿನಿಗೂ ತಂದೆಯ ಮೇಲೆ ಬಹಳ ಭಕ್ತಿಯಿದ್ದಿತು. ತಂದ ಕಾಶಿಗೆ ಹೋಗಿ ಹಿಂದಿರುಗಿ ಬಾರದೆ ಅಲ್ಲಿಯೇ ಇರುವನೆಂದ ಮಾತು ಹಿಡಿಸಲಿಲ್ಲ. ಆದರೆ, ತಂದೆಯ ನಿಶ್ಚಯವನ್ನು ಬದಲಾಯಿಸುವಂತೆ ಮಾಡಲು ಅವರಿಂದಾಗಲಿಲ್ಲ.

ಆ ಸಂದರ್ಭದಲ್ಲಿ ಮಕ್ಕಳಿಬ್ಬರಿಗೂ ಆಸ್ತಿಯನ್ನು ಹಂಚಿ ಕೊಡುವ ವಿಷಯದಲ್ಲಿ ವಜ್ರಚಿತ್ರನಿಗೆ ಒಂದು ಪ್ರಶ್ನೆ ಇದಿರಾಯಿತು. ವ್ಯವಸಾಯ ಮತ್ತು ವ್ಯಾಪಾರಗಳು ಮುಖ್ಯ ಸೊತ್ತುಗಳು. ಮಕ್ಕಳಿಬ್ಬರೂ ಬುದ್ಧಿವಂತರೇನೋ ನಿಜ. ಮಾಡುವ ಕೆಲಸಗಳಲ್ಲಿ ಹೆಚ್ಚಿನ ಶ್ರಮವನ್ನು ತಡೆದುಕೊಳ್ಳುವ ಸಹನೆಯೂ, ಹಟವೂ ಅವರಿಬ್ಬರಿಗೂ ಇದೆ. ಆದರೆ ವ್ಯವಸಾಯಕ್ಕೆ ಆಗತ್ಯವಾದ ನೈಪುಣ್ಯತೆ ವ್ಯಾಪಾರಕ್ಕೆ ಉಪಯೋಗವಾಗದು. ಹಾಗೆಯೇ ವ್ಯಾಪಾರಕ್ಕೆ ಅಗತ್ಯವಾದ ಜಾಣತನವೂ, ಶಾಂತತೆಯೂ ಸೌಮ್ಯ ಮಾತುಗಳೂ ವ್ಯವಸಾಯಕ್ಕೆ ಉಪಯೋಗವಾಗದು.

ವಜ್ರಚಿತ್ರನು ದೀರ್ಘಾಲೋಚನೆ ಮಾಡಿ ಮಕ್ಕಳಿಬ್ಬರನ್ನೂ ಕರೆದು ಅವರ ಕೈಗೆ ಒಂದೊಂದು ರೂಪಾಯಿಯನ್ನು ಕೊಟ್ಟು, "ಇದರಿಂದ ಸಂತೆಗೆ ಹೋಗಿ ನಿಮಗಿಷ್ಟವಾದ ವಸ್ತುಗಳನ್ನು ಕೊಂಡು ಕೊಂಡು ಬನ್ನಿ" ಎಂದನು.

ಎಂ. ಆರ್. ಕಿಷನ್

ಶ್ರೀಮುಖನು ತಂದೆ ಕೊಟ್ಟ ರೂಪಾಯಿಯನ್ನು ಪರಿಶೀಲಿಸಿ, "ಇದು ನಡೆಯದ ನಾಣ್ಯ. ಇಂತಹ ನಾಣ್ಯವನ್ನು ಕೊಟ್ಟು ವಸ್ತುಗಳನ್ನು ಕೊಂಡುಕೊಂಡು ಬಾ ಎಂದರೆ ಹೇಗೆ? ಸಂತೆಯಲ್ಲಿರುವ ವ್ಯಾಪಾರಿಗಳು ಅಂತಹ ಮೂಢರೇನಲ್ಲ. ಕಳ್ಳ ನಾಣ್ಯವನ್ನು ನೀಡಿದರೆ ನನಗೆ ಅವಮಾನವಾದರೂ ಆದೀತು" ಎಂದು ಹೇಳಿ ಅದನ್ನು ನೆಲಕ್ಕೆ ಬೀಸಿ ಒಗೆದನು.

ಬಹುಮುಖನು ತನ್ನ ಕೈಗೆ ತಂದೆ ಕೊಟ್ಟ ರೂಪಾಯಿಯನ್ನು ನೋಡಿದನು. ಅದೂ ನಕಲೀ ನಾಣ್ಯವೇ. ಆದನ್ನು ಅವನು ತಂದೆಗೆ ಹಿಂದಿರುಗಿ ಕೊಡುತ್ತ, "ಸಂತೆಯಲ್ಲಿ ಚಿಲ್ಲರೆ ದೊರೆಯುವುದು ಕಷ್ಟ. ಇದನ್ನು ತೆಗೆದುಕೊಂಡು ಚಿಲ್ಲರೆಯಾಗಿಯೇ ಕೊಟ್ಟರೆ ಒಳ್ಳೆಯದು" ಎಂದು ಹೇಳಿದನು.

ವಜ್ರಚಿತ್ರನು ಮಗನನ್ನು ಮುಗುಳು ನಗುವಿನಿಂದ ನೋಡುತ್ತ, "ಆಸ್ತಿಯನ್ನು ಹಂಚುವ ವಿಷಯವಾಗಿ ನಾನು ನಿಮಗೆ ಇಟ್ಟ ಪರೀಕ್ಷೆ ಇದು" ಎಂದನು.

ಅವರಿಬ್ಬರೂ ಆಶ್ಚರ್ಯದಿಂದ, "ಪರೀಕ್ಷೆಯಿಂದ ಏನು ಗೊತ್ತಾಯಿತು ಅಪ್ಪಾ?" ಎಂದು ಕೇಳಿದರು.

"ಶ್ರೀಮುಖನಿಗೆ ಹೊಲಗದ್ದೆಗಳನ್ನೂ, ಬಹುಮುಖನಿಗೆ ನಗಗಳ ವ್ಯಾಪಾರವನ್ನೂ ಕೊಡಬೇಕೆಂದಿದ್ದೇನೆ." ಎಂದನು ವಜ್ರಚಿತ್ರ.

ಹಾಗೆ ನಿರ್ಣಯಿಸಲು ಕಾರಣವೇನೆಂದು ವಿವರಿಸುವಂತೆ ಮಕ್ಕಳಿಬ್ಬರೂ ಕೇಳಿಕೊಂಡರು.

ವಜ್ರಚಿತ್ರನು ಹೀಗೆಂದನು:

ವ್ಯವಸಾಯದ ಕೆಲಸದಲ್ಲಿ ಒಕ್ಕಲಿಗರ ಮೇಲೂ ಕೂಲಿಯಾಳುಗಳ ಮೇಲೂ ಅಗತ್ಯ ಬಿದ್ದಾಗ ಸ್ವಲ್ಪ ದುರುಸಾಗಿ, ತುಸು ತೀವ್ರವಾಗಿ ವ್ಯವಹರಿಸುವಂತಹ ಗುಣವಿರಬೇಕು. ನಗಗಳ ವ್ಯಾಪಾರ ನಿರ್ವಹಿಸಲು ಕತ್ತಿಯ ಮೇಲೆ ಸಾಮು ಮಾಡುವಂತಹ ಚಾತುರ್ಯವಿರಬೇಕು. ಸಾಮಾನ್ಯ ಜನರೂ ದೊಡ್ಡ ದೊಡ್ಡ ಜಮೀನುದಾರರೂ, ರಾಜವಂಶದವರೂ ಹೀಗೆ ಅನೇಕ ತರಗತಿಯವರು ಗಿರಾಕಿಗಳಾಗಿ ಬರುವರು. ಅವರೊಂದಿಗೆ ತಕ್ಕ ಹಾಗೆ ವ್ಯವಹರಿಸಲು ಯುಕ್ತಿಯುಕ್ತವಾದ ಮಾತುಗಳು ಬೇಕು. ನಾನು ಕೊಟ್ಟ ನಾಣ್ಯವು ನಡೆಯಲಾರದೆಂದು ತಿಳಿದು ನಿಮ್ಮಲ್ಲಿ ಒಬ್ಬನು ಕೋಪದ ದುರುಸು ತೋರಿಸಿದನು. ಮತ್ತೊಬ್ಬನು ಯುಕ್ತಿಯ ಮಾತಿನಿಂದ ಚಿಲ್ಲರೆಯಾಗಿ ಕೇಳಿದನು. ನಿಮ್ಮ ಈ ಪ್ರವರ್ತನೆಗೆ ಅನುಗುಣವಾಗಿ ಶ್ರೀಮುಖನಿಗೆ ಹೊಲಗದ್ದೆಗಳನ್ನೂ, ಬಹುಮುಖನಿಗೆ ನಗಗಳ ವ್ಯಾಪಾರವನ್ನೂ ಕೊಡುವುದೆಂದು ನಿಶ್ಚಯಿಸಿದ್ದೇನೆ." ತಂದೆಯ ನಿರ್ಣಯವು ಇಬ್ಬರು ಮಕ್ಕಳಿಗೂ ಸರಿಯೆಂದೇ ತೋರಿತು. ಅದಕ್ಕೆ ಸಂತೋಷದಿಂದ ಒಪ್ಪಿಕೊಂಡರು.





ಉನ್ಮತ್ತರಾದ ಸೈನಿಕರಿಂದ ದೂಡಲ್ಪಟ್ಟು ಬಿದ್ದ ಜಮದಗ್ನಿ ಚಲನವಿಲ್ಲದೆ ಬಿದ್ದಲ್ಲೇ ಬಿದ್ದುಕೊಂಡಿದ್ದನು. ರೇಣುಕಾದೇವಿ ಗಂಡನ ಶರೀರದ ಮೇಲೆ ಬಿದ್ದು ಒಂದೇ ಸಮನೆ ಅಳುತ್ತಿದ್ದಳು. ಅರಣ್ಯದೊಳಗೆ ಹೋಗಿದ್ದ ಪರಶುರಾಮನು ಆಶ್ರಮಕ್ಕೆ ಹಿಂದಿರುಗಿದಾಗ ತಾಯಿಯ ರೋದನಾ ಧ್ವನಿ ಅವನ ಕಿವಿಗಳನ್ನು ಸೇರಿತು.

ನಡೆದ ಸಂಗತಿಯನ್ನು ತಿಳಿದ ಮೇಲೆ ಪರಶುರಾಮನು ತನ್ನ ಪರಶುವನ್ನೆತ್ತಿಕೊಂಡು ಝಳಪಿಸುತ್ತ ಹಿಂದಿರುಗಿ ನೋಡದೆಯೇ ಮಾಹಿಷ್ಮತೀ ನಗರದ ಕಡೆಗೆ ಓಡಿದನು.

ಆಗ ಭೃಗು ಮಹರ್ಷಿ ಎಲ್ಲಿಂದಲೋ ಬರುತ್ತ ಜಮದಗ್ನಿಯ ಆಶ್ರಮವನ್ನು ಪ್ರವೇಶಿಸಿದನು. ಅವನು ನಡೆದ ಸಂಗತಿಯನ್ನು ತಿಳಿದು, ರೇಣುಕೆಗೆ ಸಮಾಧಾನ ಹೇಳಿ ಜಮದಗ್ನಿಯನ್ನು ಬಿಟ್ಟು ಹೋಗುತ್ತಿರುವ ಕೊನೆಯ ಪ್ರಾಣವನ್ನು ತನ್ನ ಯೋಗ ಶಕ್ತಿಯಿಂದ ನಿಲ್ಲಿಸಿ ಬದುಕುವಂತೆ ಮಾಡಿದನು. ರೇಣುಕೆ ಸಂತೋಷ ಕೃತಜ್ಞತೆಗಳಿಂದ ಭೃಗುವಿನ ಪಾದಗಳನ್ನು ಆನಂದಬಾಷ್ಪ ಸುರಿಸಿ ತೊಳೆದಳು.

ಅಲ್ಲಿ ಮಾಹಿಷ್ಮತೀ ನಗರದಲ್ಲಿ ಬಲಾತ್ಕಾರದಿಂದ ಸಾಗಿಸಿಕೊಂಡು ಬಂದ ಧೇನು, ತಾವು ಕೇಳುವುದನ್ನು ಕೊಡಲಿಲ್ಲವೆಂಬ ಕಾರಣದಿಂದ ಸೈನಿಕರು ಅದನ್ನು ಹೊಡೆಯುತ್ತ, ತಿವಿಯುತ್ತ, ಬಗೆಬಗೆಯಾಗಿ ಹಿಂಸಿಸಿಕೊಂಡಿದ್ದರು. ಆ ಸಮಯಕ್ಕೆ ಸರಿಯಾಗಿ ಪರಶುರಾಮನು ಪ್ರಳಯಕಾಲದ ರುದ್ರನಂತೆ ಅಲ್ಲಿಗೆ ಬಂದನು. ಅವನ ರೌದ್ರಾಕಾರವನ್ನು ನೋಡಿ ಸೈನಿಕರೆಲ್ಲ ಓಡಿಹೋದರು. ಪರಶುರಾಮನು ಧೇನುವನ್ನು ತಡವಿ, ಆಶ್ರಮಕ್ಕೆ ಹೋಗುವಂತೆ ಹೇಳಿ ತಟ್ಟಿ ಕಳುಹಿಸಿದನು. ಧೇನು ಉತ್ಸಾಹದಿಂದ ಹುಂಗುಡುತ್ತಾ ಹೊರಟುಹೋಯಿತು.

"ಓ ರಾಜಾಧಮಾ! ಸಂರಕ್ಷಕನಾಗಿರಬೇಕಾದ ರಾಜನು ದುಷ್ಟನಾದಾಗ ತಕ್ಕ ಶಿಕ್ಷೆ ಅನುಭವಿಸಲೇಬೇಕು. ಮನೆಯೊಳಗಿನಿಂದ ಬಾರೋ ಹೊರಗೆ!"

ಆ. ಪರಶುರಾಮವತಾರ



ಎಂದು ಪರಶುರಾಮನು ರಾಜಪ್ರಾಸಾದದ ಮುಂದೆ ನಿಂತು ಕೂಗಿದನು, ಕೊಡಲಿಯನ್ನು ತಿರುಗಿಸುತ್ತಾ.

ಕಾರ್ತವೀರ್ಯನು ಮೊದಲು ಪರಶುರಾಮನನ್ನು ನೋಡಿ ಸಾಧಾರಣ ಮುನಿಕುಮಾರನೆಂದು ಕೊಂಡನು. ಆದರೆ ಅವನ ಕರ್ಕಶ ಮಾತುಗಳನ್ನೂ, ಕೋಪೋದ್ರೇಕವನ್ನೂ ರಭಸವನ್ನೂ ನೋಡಿ ಸಾವಿರ ಕೈಗಳನ್ನು ಬರಿಸಿಕೊಂಡು ಅವನಿದಿರು ನಿಂತನು. ಇಬ್ಬರಿಗೂ ದ್ವಂದ್ವಯುದ್ಧವು ತೊಡಗಿತು.

ಕಾರ್ತವೀರ್ಯಾರ್ಜುನನು ಪ್ರಯೋಗಿಸಿದ ಅಸ್ತ್ರಗಳನ್ನೂ, ಶಸ್ತ್ರಗಳನ್ನೂ ಪರಶುರಾಮನು ತನ್ನ ಕೊಡಲಿಯಿಂದ ಛಿದ್ರ ಛಿದ್ರ ಮಾಡಿ ಹಾರಿಸಿದನು. ಅವನ ಸಾವಿರ ಕೈಗಳನ್ನೂ ಮರದ ಕೊಂಬೆಗಳನ್ನು ಕಡಿಯುವ ಹಾಗೆ ಕಡಿದು ಹಾಕಿದನು. ಕಾರ್ತವೀರ್ಯನು ಬರಿ ಮುಂಡದೊಂದಿಗೆ ನೆಲಕ್ಕೆ ಬಿದ್ದನು. ಆಗ ಅವನಿಗೆ ತಾನು ಶಾಪವಶದಿಂದ ಹುಟ್ಟಿದ ಸುದರ್ಶನನೆಂಬುದು ನೆನಪಿಗೆ ಬಂದಿತು. ಪರಶುರಾಮನು ವಿಷ್ಣುವೇ ಎಂದು ತಿಳಿದು ಮನಸ್ಸಿನಲ್ಲಿಯೇ ಅವನಿಗೆ ನಮಸ್ಕಾರ ಮಾಡುತ್ತ ದೇಹವನ್ನು ಬಿಟ್ಟು ಹೋಗಿ, ವಿಷ್ಣುವಿನ ಸುದರ್ಶನ ಚಕ್ರದಲ್ಲಿ ಲೀನನಾದನು.

ಪರಶುರಾಮನು ತನ್ನ ಆಶ್ರಮಕ್ಕೆ ಹಿಂದಿರುಗಿ ತಂದೆ ಕ್ಷೇಮವಾಗಿರುವುದನ್ನು ನೋಡಿ, ತಾನು ಮಾಡಿ ಬಂದ ಕಾರ್ಯವನ್ನು ಕುರಿತು ಉತ್ಸಾಹದಿಂದ ಹೇಳಿದನು.

ಅದನ್ನು ಕೇಳಿದ ಜಮದಗ್ನಿ "ಅಪ್ಪಾ, ನೀನು ಮಾಡಿದ ಕೆಲಸ ಮುನಿಗಳಾದ ನಮಗೆ ತಕ್ಕ ಕೆಲಸವಲ್ಲ. ಇದಕ್ಕೆ ಪರಿಹಾರ ಮಾಡಿಕೊಳ್ಳಲು ನೀನು ತಪಸ್ಸು ಮಾಡಬೇಕು" ಎಂದನು.

"ತಂದೆಯೇ, ರಾಜನಾದವನು ಅಧರ್ಮ ಕಾರ್ಯ ಮಾಡಿದಾಗ ಅವನನ್ನು ಶಿಕ್ಷಿಸುವ ಅರ್ಹತೆ ಎಲ್ಲರಿಗೂ ಬರುತ್ತದೆ. ನಿಮ್ಮ ಅಪ್ಪಣೆಯಾದುದರಿಂದ ತಪಸ್ಸು ಮಾಡುತ್ತೇನೆಯೇ ಹೊರತು, ಅದು ಪ್ರಾಯಶ್ಚಿತ್ತದ ತಪಸ್ಸು ಮಾತ್ರ ಅಲ್ಲ" ಎಂದು ಹೇಳಿ ಅರಣ್ಯಕ್ಕೆ ಹೋಗಿ ತಪಸ್ಸಿನಲ್ಲಿ ಮಗ್ನನಾದನು.

ಕಾರ್ತವೀರ್ಯನಿಗೆ ಸಾವಿರಮಂದಿ ಕುಮಾರರಿದ್ದರು. ಅವರು ಹೈಹಯಕ್ಷತ್ರಿಯರನ್ನೆಲ್ಲಾ ಸೇರಿಸಿಕೊಂಡು, ತಂದೆಯನ್ನು ಕೊಂದ ಪರಶುರಾಮನ ಮೇಲೆ ದ್ವೇಷವಿಟ್ಟುಕೊಂಡು ಜಮದಗ್ನಿಯ ಆಶ್ರಮಕ್ಕೆ ದಾಳಿ ಇಟ್ಟರು.

ಆಗ ಜಮದಗ್ನಿ ತಪಸ್ಸಿನ ಸಮಾಧಿಯಲ್ಲಿ ನಿಶ್ಚಲನಾಗಿ ಕುಳಿತಿದ್ದನು. ರೇಣುಕಾ ದೇವಿ, ಹದಿ ಇಪ್ಪತ್ತೊಂದು ಸಾರಿ ರಾಮನನ್ನು ಬಾಬಾ ಎಂದು ಕೊರಳೆತ್ತಿ ಕೂಗಿ ಕೂಗಿ ಕರೆದಳು.

ಹೈಹಯರು ಜಮದಗ್ನಿಯ ತಲೆಯನ್ನು ಕಡಿದು ಬಿಟ್ಟರು. ರೇಣುಕೆ ಗಂಡನ ಮುಂಡದ ಮೇಲೆ ಬಿದ್ದು ಮತ್ತೆ ಇಪ್ಪತ್ತೊಂದು ಸಾರಿ "ರಾಮಾ ರಾಮಾ" ಎಂದು ಕೂಗಿ ಮೂರ್ಛೆ ಹೋದಳು.

ಜಮದಗ್ನಿಯ ತಲೆ ಮುಂಡದಿಂದ ಹಾರಿ ದೂರ ಹೋಗಿ ಬಿದ್ದು ಹೊರಳಿ ಕಲ್ಲುಗಳ ಮಧ್ಯೆ ಸಿಕ್ಕಿಕೊಂಡಿತು. ರಾಜಪುತ್ರರು ಆಶ್ರಮಕ್ಕೆ ಬೆಂಕಿ ಹಚ್ಚಿದರು. ಅಲ್ಲಿದ್ದವರೆಲ್ಲರೂ ಆ ಉರಿಯಲ್ಲಿ ಸಿಕ್ಕಿಕೊಂಡರು. ಗಂಡನ ಮುಂಡದೊಂದಿಗೆ ರೇಣುಕೆಯೂ ಸುಟ್ಟು ಹೋದಳು.

ಅರಣ್ಯದಲ್ಲಿ ತಪಸ್ಸು ಮಾಡಿಕೊಂಡಿದ್ದ ಪರಶುರಾಮನಿಗೆ ಧ್ಯಾನ ಭಂಗವಾಯಿತು. ತಾಯಿಯ ಕರೆ ಇಪ್ಪತ್ತೊಂದು ಸಾರಿ ಅವನ ಕಿವಿಗಳಲ್ಲಿ ಮಾರ್ಮೊಳಗುತ್ತಿದ್ದುವು. ಮನಸ್ಸಿನಲ್ಲಿ ಕೆಡುಕಿನ ಅಲೆಗಳು ಏಳುತ್ತಿರಲು, ದೊಡ್ಡ ದೊಡ್ಡ ಹೆಜ್ಜೆಗಳಿಂದ ಆಶ್ರಮಕ್ಕೆ ಬಂದನು.

ಆಗ ಅವನ ಕಣ್ಣಿಗೆ ಬಿದ್ದ ದೃಶ್ಯ, ಆಶ್ರಮವು ಉರಿಯುತ್ತಾ ಇದ್ದಿತು. ತಂದೆತಾಯಿಯರು ಮಸಿಯಾಗಿ ಹೋಗಿದ್ದರು. ಉರಿಯನ್ನು ಆರಿಸಲು ಬರುವ ಸುತ್ತು ಮುತ್ತಲಿನ ಆಶ್ರಮ ವಾಸಿಗಳನ್ನು ಹೈಹಯ ಸೈನಿಕರು ಅಮಾನುಷವಾಗಿ ಚಿತ್ರವಧೆ ಮಾಡಿಕೊಂಡಿದ್ದರು.

ಪರಶುರಾಮನಿಗೆ ಬಂದ ಕೋಪಕ್ಕೆ ಮೇರೆ ಇರಲಿಲ್ಲ. ಪರಶುವನ್ನು ತನಗೆ ಪ್ರಸಾದಿಸಿದ ಶಿವನನ್ನು ಸ್ಮರಿಸಿ, ಆ ಪರಶುವನ್ನೆತ್ತಿಕೊಂಡು ಮಹಾರೌದ್ರ ಜ್ವಾಲೆಯಾಗಿ ಉರಿದೆದ್ದನು. ಮುಳ್ಳಿನ ಪೊದೆಗಳನ್ನು ತರಿದು ಒಟ್ಟುವ ಹಾಗೆ ಹದ್ದಿಗೆ ಸಿಕ್ಕಿದ ದುಷ್ಟರನ್ನು ಹತಮಾಡತೊಡಗಿದನು. ಹೈಹಯ ಸೈನಿಕರೊಬ್ಬರೂ ಬದುಕಿ ಹಿಂದೆ ಹೋಗಲಿಲ್ಲ.

ಕಲ್ಲಿನ ನಡುವೆ ಸಿಕ್ಕಿಕೊಂಡ ಜಮದಗ್ನಿಯ ತಲೆಯನ್ನು ಎತ್ತಿ ತನ್ನ ಎದೆಗೆ ತಿಕ್ಕಿಕೊಂಡು, " ಅಪ್ಪಾ ! ಕಣ್ಣೀರು ಕೂಡಾ ಬಾರದಂತೆ ನನ್ನ ಗುಂಡಿಗೆ ಉರಿಯುತ್ತಾ ಇದೆ. ನಿಮ್ಮ ತಲೆಯನ್ನು ಶತ್ರುಗಳ ರಕ್ತದ ಮಾಡುವಿನಲ್ಲಿ ಮುಳುಗಿಸಿ ಅಂತ್ಯಕ್ರಿಯೆ ಮಾಡುತ್ತೇನೆ " ಎಂದು ಹೇಳುತ್ತಾ ಪರಶುರಾಮನು,



ಉನ್ನತವಾದ ಶಿಲಾಗ್ರದ ಮೇಲೆ ಏರಿ ನಿಂತು ಪರಶುವನ್ನು ಮೇಲೆತ್ತಿ, " ಈ ಕೊಡಲಿಯಿಂದ ಭೂಮಿಯ ಮೇಲೆ ರಾಜನೆಂಬುವನು ಇಲ್ಲದಂತೆ ಮಾಡುತ್ತೇನೆ. ದುಷ್ಟ ರಾಜರ ತಲೆಗಳೆಲ್ಲಾ ಈ ಕೊಡಲಿಯಿಂದ ಉರುಳುತ್ತವೆ." ಎಂದು ಇಪ್ಪತ್ತೊಂದು ಸಾರಿ ಗರ್ಜಿಸಿ ಪ್ರತಿಜ್ಞೆ ಮಾಡಿದನು. ಅವನ ಪ್ರತಿಜ್ಞಾ ಗರ್ಜನೆಗಳು ದಿಕ್ಕುಗಳಲ್ಲೆಲ್ಲಾ ಪ್ರತಿಧ್ವನಿಸಿದುವು. ಅವನ ಭೀಷಣ ಪ್ರತಿಜ್ಞೆಯನ್ನು ಕೇಳಿ, ಬ್ರಹ್ಮ ಋಷಿಗಳು ಓಡಿ ಬಂದು ಅವನಿಗೆ ಶಾಂತ ವಚನಗಳನ್ನು ಹೇಳಿದರು.

ಭೃಗುಮಹರ್ಷಿ, " ಕಂದಾ, ದುಷ್ಟರನ್ನು ಶಿಕ್ಷಿಸಲು ಭಗವಂತನಿದ್ದಾನೆ. ಸಾಧುಸಜ್ಜನರನ್ನು ರಕ್ಷಿಸುವುದು ಅವನ ಹೊಣೆ. ನೀನು ಶಾಂತನಾಗಿರಬೇಕಪ್ಪಾ " ಎಂದನು.

" ಆ ಭಗವಂತನು ಆಕಾಶದಿಂದ ಇಳಿದು ಬರುವವನಲ್ಲ. ಮನುಷ್ಯನಾಗಿ ಹುಟ್ಟಿ ಮನುಷ್ಯರ



ನಡುವಿನಲ್ಲಿಯೇ ಇರುತ್ತಾನೆ. ಅಂತಹವನು ನಾನೇ ಎಂದು ಪಿತಾಮಹರೇಕೆ ತಿಳಿಯುವುದಿಲ್ಲ? ಆದುದರಿಂದಲೇ ಶಾಂತ ವಚನಗಳು ನನ್ನನ್ನು ಸಮಾಧಾನಪಡಿಸಲಾರವು!" ಎಂದು ಹೇಳಿ ಪರಶುರಾಮನು ನೆಟ್ಟಗೆ ಹಿಮಾಲಯಕ್ಕೆ ಹೋಗಿ, ಶಿವನನ್ನು ಧ್ಯಾನಿಸಿ ತಪಸ್ಸಿಗೆ ಕುಳಿತನು.

ಶಿವನು ಪ್ರಸನ್ನನಾಗಿ ಪರಶುರಾಮನನ್ನು ಶಾಂತಪಡಿಸಲು ನೋಡಿದನು. ಆಗ ಪರಶುರಾಮನು, "ಮಹಾದೇವಾ! ಅದಕ್ಕಲ್ಲ ನಾನು ನಿನ್ನನ್ನು ಧ್ಯಾನಿಸಿದ್ದು. ನಿನ್ನಾಜ್ಞೆಯಿಲ್ಲದೆ ಇರುವೆಯೂ ಕಚ್ಚಲಾರದು. ಲಯಮೂರ್ತಿಯಾದ ನಿನಗೆ ಹೆಚ್ಚಿಗೆ ಹೇಳಬೇಕಾದುದೇನಿಲ್ಲ. ನನ್ನ ಪ್ರತಿಜ್ಞೆ ನೆರವೇರಲು ಬೇಕಾಗುವ ಬಲವನ್ನು ನನಗೆ ಕೊಡು" ಎಂದು ಕೈ ಮುಗಿದನು.

ಶಿವನು ಅವನಿಗೆ ಎಲ್ಲಾ ಅಸ್ತ್ರಗಳನ್ನೂ ಕೊಟ್ಟು, ಪ್ರತ್ಯೇಕವಾದೊಂದು ದಿವ್ಯಾಸ್ತ್ರವನ್ನೂ ಕೊಟ್ಟು, "ಇದು ಭಾರ್ಗವಾಸ್ತ್ರವೆಂದು ಪ್ರಸಿದ್ಧವಾಗಿ ನಿನ್ನ ಹೆಸರಿನಲ್ಲಿ ಚಿರಸ್ಥಾಯಿಯಾಗಿರುತ್ತದೆ. ನೀನು ಕಾರಣ ಜನ್ಮದವನು. ಅವತಾರ ಮೂರ್ತಿ. ಹೋಗು. ನಿನಗೆ ಯಾವ ತಡೆಯೂ ಇಲ್ಲ" ಎಂದು ಸಂತೋಷದಿಂದ ಆಶೀರ್ವಾದ ಮಾಡಿದನು.

ಪರಶುರಾಮನು, ಗೋಲೋಕದಲ್ಲಿರುವ ವಿಷ್ಣುವಿನ ಮತ್ತೊಂದು ರೂಪವಾದ ಕೃಷ್ಣನನ್ನು ಧ್ಯಾನಿಸಿ ಕೃಷ್ಣ ಕವಚವನ್ನು ಪಡೆದನು. ಕೃಷ್ಣನು ಅವನಿಗೆ ತನ್ನ ಅಂಶವನ್ನು ದೊಡ್ಡದೊಂದು ಧನುಸ್ಸಿನಲ್ಲಿ ಸೇರಿಸಿ ಕೊಟ್ಟು, ರಾಮಾವತಾರದಲ್ಲಿ ಅದನ್ನು ವಾಪಸು ಪಡೆದುಕೊಳ್ಳುವೆನೆಂದೂ ಹೇಳಿದನು.

ಇಷ್ಟು ಬಲಗಳನ್ನು ಸಂಪಾದಿಸಿಕೊಂಡ ಮೇಲೆ, ಪರಶುರಾಮನು ಕ್ಷತ್ರಿಯರ ಮೇಲೆ ಮುಗಿಬೀಳತೊಡಗಿದನು. ನಿಜಕ್ಕೂ ಆಗ ರಾಜರೆಲ್ಲಾ ಕೊಬ್ಬಿ ಬಹಳ ದುಷ್ಟರೇ ಆಗಿದ್ದರು. ಅವರ ದುಷ್ಪರಿಪಾಲನೆಯಲ್ಲಿ ನರಳಿದ ಪ್ರಜೆಗಳೆಲ್ಲಾ ಪರಶುರಾಮನನ್ನು ಆಶ್ರಯಿಸಿದರು. ಕಾರ್ತವೀರ್ಯನ ಕುಮಾರರೆಲ್ಲಾ ಪರಶುರಾಮನ ಹೆಸರು ಕೇಳಿದ ಕೂಡಲೇ ನಗರವನ್ನು ಬಿಟ್ಟು ಓಡಿ ಹೋದರು. ಪರಶುರಾಮನು ಆ ನಗರದ ಮೇಲೆ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಪರಶುರಾಮನ ಪ್ರೀತಿಗಾಗಿ ಮಾಹಿಷ್ಮತೀ ನಗರವು ಇಪ್ಪತ್ತೊಂದು ದಿನಗಳವರೆಗೆ ಉರಿಯುತ್ತಾ ನಾಮ ರೂಪಗಳಿಲ್ಲದೆ ಹೋಯಿತು.

ಓಡಿದರೂ ಬಿಡಲಿಲ್ಲ ಪರಶುರಾಮ. ಕಾರ್ತವೀರ್ಯನ ಸಾವಿರ ಮಂದಿ ಕುಮಾರರೂ, ಹೈಹಯ ವಂಶದ ಕ್ಷತ್ರಿಯರೂ, ಇತರ ಅನೇಕ ದೇಶಗಳ ಕ್ಷತ್ರಿಯ ರಾಜರೂ ಒಂದಾಗಿ ಕೂಡಿ ತಮ್ಮೆದಿರು ಬಂದ ಪರಶುರಾಮನನ್ನು ಇದಿರಿಸಿದರು. ಬಲಿಪಶುಗಳನ್ನು ಕಡಿದು ಹಾಕಿದ ಹಾಗೆ ಪರಶುರಾಮನು ಅವರೆಲ್ಲರನ್ನೂ ತರಿದು ಹಾಕಿ, ಅವರ ರಕ್ತಗಳನ್ನು ಐದು ಮಡುಗಳ ತುಂಬಾ ತುಂಬಿಸಿದನು. ಜಮ



ಬದಲಾಯಿಸಿ, ಮಕ್ಕಳನ್ನು ಬ್ರಾಹ್ಮಣ ಪುತ್ರರ ಹಾಗೆ ಮಾಡಿ, ಕೆಲವಾರು ತಲೆಗಳು ತಪ್ಪಿ ಉಳಿಯು ವಂತೆ ಮಾಡಿದರು.

ಈ ವಿಧವಾಗಿ ಪರಶುರಾಮನು ಇಪ್ಪತ್ತೊಂದು ಸಾರಿ ಭೂಮಿಯಲ್ಲಿ ತಿರುಗಿ ಕ್ಷತ್ರಿಯರೆಂಬವರಾರೂ ಕಾಣದಂತೆ ಮಾಡಿದನು. ತಾಯಿಯ ಪ್ರೀತ್ಯರ್ಥ ವಾಗಿ ಈ ಇಪ್ಪತ್ತೊಂದು ಸಂಹಾರ ಪ್ರದಕ್ಷಿಣೆಗಳಿಂದ ಅವನ ಪ್ರತಿಜ್ಞೆ ಪೂರ್ತಿಯಾಯಿತು. ಹೀಗೆ ಎಲ್ಲಾ ಕ್ಷತ್ರಿಯ ರಾಜರನ್ನೂ ಕೊಂದುದರಿಂದ ಪರಶು ರಾಮನು ತನ್ನ ಅಧೀನವಾದ ಭೂಮಿಯನ್ನೆಲ್ಲಾ ಕಶ್ಯಪನಿಗೆ ದಾನಮಾಡಿ, ದಕ್ಷಿಣ ಸಮುದ್ರ ತೀರದ ಮಹೇಂದ್ರ ಪರ್ವತದ ಮೇಲೆ ತಪಸ್ಸಿನಲ್ಲಿ ಮಗ್ನ ನಾಗಿ ಕುಳಿತನು.

ಬ್ರಾಹ್ಮಣರ ಮನೆಗಳಲ್ಲಿಯೂ, ಮುನಿಗಳ ಆಶ್ರಮಗಳಲ್ಲಿಯೂ ಬೆಳೆದು ದೊಡ್ಡವರಾದ ಕ್ಷತ್ರಿಯ ಕುಮಾರರಿಗೆಲ್ಲಾ, ಕಶ್ಯಪ ಪ್ರಜಾಪತಿ ಪರಶುರಾಮನು ಕೊಟ್ಟ ಭೂಮಿಯನ್ನು ಹಂಚಿ ಕೊಟ್ಟನು. ಆದರಿಂದ ಬೇರೆ ಬೇರೆ ರಾಜ್ಯಗಳು ಏರ್ಪಟ್ಟುವು. ರಾಜವಂಶ ಗಳೂ ತಲೆ ಎತ್ತಿದುವು. ಅಂತಹ ರಾಜವಂಶಗಳಲ್ಲಿ ಇಕ್ಷ್ವಾಕು ಸಂತತಿಗೆ ಸೇರಿದ ರಘು ಮಹಾರಾಜನು ರಘುವಂಶಕ್ಕೆ ಮೂಲ ಪುರುಷನಾದನು.

ಈ ರಘುವಂಶದಲ್ಲಿ ವಿಷ್ಣು ದಶರಥ ಮಹಾ ರಾಜನ ಹಿರಿಯ ಮಗನಾಗಿ ರಾಮಾವತಾರವನ್ನೆತ್ತಿ ಆದರ್ಶ ಮಾನವನೆನಿಸಿದನು. ಮಾನವತ್ವದ ಆಚರಣೆ ಹೇಗಿರಬೇಕೆಂಬುದಕ್ಕೆ ರಾಮನೇ ಉದಾಹರಣೆ. ರಾಮನಿಂದ ದೊಡ್ಡ ರೀತಿಯಲ್ಲಿ ರಾಕ್ಷಸ ಸಂಹಾರ ವಾಯಿತು. ಅವನ ರಾಜ್ಯ ಪರಿಪಾಲನಾ ವಿಧಾನವು ರಾಮರಾಜ್ಯವೆಂದು ಅಜರಾಮರವಾಯಿತು. ರಾಜ ನಾದವನು ಪ್ರಜೆಗಳ ಅಭಿಮತವನ್ನು ಒಪ್ಪಿಕೊಳ್ಳಲು ಎಂತಹ ತ್ಯಾಗವನ್ನಾದರೂ ಮಾಡಬೇಕಾಗಿ ಬರುತ್ತ ದೆಂಬುದನ್ನು ರಾಮನು ನಿರೂಪಿಸಿದನು.

ದಗ್ನಿಯ ತಲೆಯನ್ನು ಅವುಗಳಲ್ಲಿ ಮುಳುಗಿಸಿ ಪಿತೃತರ್ಪಣ ಮಾಡಿದ ಮೇಲೆ, ಪರಶುರಾಮನು ಆ ತಲೆಗೆ ಅಗ್ನಿ ಸಂಸ್ಕಾರ ಜರುಗಿಸಿದನು.

ಶಮಂತ ಪಂಚಕವೆಂದು ಹೆಸರು ಪಡೆದ ಆ ಐದು ರಕ್ತದ ಮಡುಗಳಿರುವ ಪ್ರದೇಶವೇ, ಮುಂದಿನ ಕಾಲದಲ್ಲಿ ಕುರುಕ್ಷೇತ್ರವೆಂಬ ಹೆಸರಿನಿಂದ ಖ್ಯಾತ ವಾಯಿತು. ಆ ಪ್ರದೇಶವು ಮತ್ತೊಂದು ಸಾರಿ ಬಲಿಯನ್ನು ಬಯಸಿ ಅಲ್ಲಿಯೇ ಮಹಾಭಾರತ ಯುದ್ಧವು ನಡೆದು ರಕ್ತದ ನೆರೆಯೇ ಪ್ರವಹಿಸಿತು.

ಪರಶುರಾಮನು ಯಜ್ಞಮಾಡಿ ಶುಚಿರ್ಭೂತ ನಾಗಿ ತಂದೆಗೆ ಉತ್ತರ ಕ್ರಿಯೆಗಳನ್ನು ಯಥಾವಿಧಿ ಯಾಗಿ ಮುಗಿಸಿದ ಮೇಲೆ, ಕ್ಷತ್ರಿಯರ ಸಂಹಾರ ಕಾರ್ಯಕ್ಕೆ ಹೊರಟನು. ಹುಡುಕಿ ಹುಡುಕಿ ಕ್ಷತ್ರಿಯ ರನ್ನು ತನ್ನ ಚಪಗೊಡಲಿಗೆ ಆಹುತಿ ಕೊಟ್ಟನು. ಕ್ಷತ್ರಿಯ ಮಾತೆಯರು ವಂಶಾಂಕುರಗಳಾದ ಮಕ್ಕಳನ್ನು ಬ್ರಾಹ್ಮಣ ಕಾಂತೆಯರ ಹಾಗೆ ವೇಷ



"ದಶಾವತಾರಗಳಲ್ಲಿ ಏಳನೆಯದಾದ ರಾಮಾವತಾರವು ವಾಲ್ಮೀಕಿ ಮಹರ್ಷಿಯ ರಚನೆಯಲ್ಲಿ ರಾಮಾಯಣ ಕಾವ್ಯವಾಗಿ ವ್ಯಾಪ್ತಿಹೊಂದಿತು." ಹೀಗೆ ಹೇಳಿ ಸೂತಪೌರಾಣಿಕನು ರಾಮನ ಕಥೆಯನ್ನು ಹೇಳಲು ಉಪಕ್ರಮಿಸಿದನು :

ಹಿರಣ್ಯಕಶಿಪು, ಹಿರಣ್ಯಾಕ್ಷರು ವಿಷ್ಣುವಿನ ಕೈಯಲ್ಲಿ ಹತರಾದ ಮೇಲೆ, ಎರಡನೇ ಸಾರಿಯ ರಾಕ್ಷಸ ಜನ್ಮದಲ್ಲಿ ರಾವಣ ಮತ್ತು ಕುಂಭಕರ್ಣರಾಗಿ ಹುಟ್ಟಿದ್ದರು. ಇವರಿಬ್ಬರೂ ಲೋಕಭಯಂಕರರಾಗಿ ವಿಜೃಂಭಿಸಿಕೊಂಡಿದ್ದರು.

ರಾವಣಾಸುರನು ದೊಡ್ಡ ತಪಸ್ಸು ಮಾಡಿ, ಬ್ರಹ್ಮನಿಂದ, ದೇವ, ಯಕ್ಷ, ಗಂಧರ್ವ ಮೊದಲಾದ ಯಾರಿಂದಲೂ ತನಗೆ ಹಾನಿಯಾಗದಂತೆ ವರವನ್ನು ಕೇಳಿ ಪಡೆದಿದ್ದನು. ಮಾನವ ಮಾತ್ರರು ತನ್ನನ್ನೇನೂ ಮಾಡುವಂತಿಲ್ಲವೆಂಬ ಗರ್ವದಲ್ಲಿ ಮಾನವರನ್ನು ವರದಲ್ಲಿ ಹೇಳಿರಲಿಲ್ಲ.

ಕುಂಭಕರ್ಣನ ಆಕಾರವೇ ಪರ್ವತದಂತಹುದು. ಅವನು ಕೂಡಾ ಭಾರಿ ತಪಸ್ಸನ್ನು ಮಾಡಿ ಬ್ರಹ್ಮನನ್ನು ಒಲಿಸಿ, ಆರು ತಿಂಗಳು ನಿದ್ದೆ, ಆರು ತಿಂಗಳು ಜಾಗರಣೆ ಎಂಬ ವರವನ್ನು ಕೇಳಿ ಪಡೆದುಕೊಂಡನು. ಅವನು ಜಾಗರಣೆಯಲ್ಲಿರುವಾಗ ಮನುಷ್ಯರನ್ನು ಹಿಡಿದು ಕೊಂದು ತಿಂದುಬಿಡುವನು.

ರಾವಣನು ಕುಬೇರನ ಪುಷ್ಪಕ ವಿಮಾನವನ್ನು ಎಳೆದುಕೊಂಡು, ಅವನನ್ನು ಲಂಕೆಯಿಂದ ಹೊರಗೆ ದೂಡಿ, ಲಂಕಾನಗರವನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡನು. ಹೀಗೆ ಲಂಕೇಶ್ವರನಾಗಿ ರಾಕ್ಷಸರೆಲ್ಲರನ್ನೂ ತನ್ನೊಂದಿಗೆ ಸೇರಿಸಿಕೊಂಡು, ಲೋಕಗಳನ್ನೆಲ್ಲಾ ಜಯಿಸುತ್ತಾ ವೀರವಿಹಾರ ಮಾಡಿದನು.

ರಾವಣನಿಗೆ ಹತ್ತು ತಲೆಗಳಿದ್ದುವು. ಅವನು ಒಮ್ಮೆ ಕೈಲಾಸಕ್ಕೆ ಹೋಗಿ, ನಂದೀಶ್ವರನನ್ನು ನೋಡಿ ಕೋತಿಮೂತಿಯವನೆಂದು ನಂದೀಶ್ವರನಿಗೆ ಎಗತಾಳಿ ಮಾಡಿದನು. ಆದರಿಂದ ಕೋತಿಗಳಿಂದಲೇ ಲಂಕೆಗೆ ಕೇಡು ಬರುವುದೆಂದು ನಂದೀಶ್ವರನು ಅವನನ್ನು ಶಪಿಸಿದನು.

ರಾವಣನು ತನ್ನ ಇಪ್ಪತ್ತು ಭುಜಗಳ ತೀಟೆ ತೀರುವ ಹಾಗೆ ಕೈಲಾಸಪರ್ವತವನ್ನು ಎತ್ತಿ ನಡುಗಿಸಿದನು. ಆಗ ಶಿವನು ತನ್ನ ಕಾಲಿನ ಹೆಬ್ಬೆರಳಿನಿಂದ ಒತ್ತಿದ ಕೂಡಲೇ ಪರ್ವತದ ಕೆಳಗೆ ಅವನ ಕೈಗಳು ಸಿಕ್ಕಿಕೊಂಡು ದೊಡ್ಡ ಧ್ವನಿಯಿಂದ ಆರ್ತನಾದ ಮಾಡಿದನು. ಆದರಿಂದಲೇ ಅವನಿಗೆ ರಾವಣನೆಂಬ ಹೆಸರು ಬಂತು. ಅದಕ್ಕೆ ಮೊದಲು ದಶಕಂಠನೆಂದೇ ಕರೆಯಿಸಿಕೊಳ್ಳುತ್ತಿದ್ದನು.

ರಾವಣನು ತನ್ನ ಒಂದೊಂದು ತಲೆಯನ್ನೂ ಖಂಡಿಸಿಕೊಂಡು, ಶಿವನನ್ನು ಅನೇಕ ವಿಧವಾಗಿ ಸ್ತೋತ್ರ ಗಾನ ಮಾಡಿ ಮೆಚ್ಚಿಸಿ ಶಿವನ ಅನುಗ್ರಹಕ್ಕೂ ಪಾತ್ರನಾದನು. ರಾವಣನು ಬಹು ದೊಡ್ಡ ಶಿವಭಕ್ತನೂ ಹೌದು.

ಅಷ್ಟೇ ದೊಡ್ಡ ಅಹಂಕಾರಿಯೂ ಹೌದು. ಎಷ್ಟು ಪರಾಕ್ರಮಶಾಲಿಯೋ ಅಷ್ಟೇ ಕ್ರೂರನೂ ನಿಜ. ಪರಸ್ತ್ರೀಯರನ್ನು ಅಪಹರಿಸುವುದರಲ್ಲಿ ಅವನಿಗೆ ಅವನೇ ಸಾಟಿ. ಸ್ತ್ರೀಯರನ್ನು ಬಲಾತ್ಕರಿಸುವುದೊಂದು ವೀರತ್ವದ ಲಕ್ಷಣವೆಂದೇ ತಿಳಿದಿದ್ದನು. ಅವನಿಗೆ ಆ ಬಗೆಯ ಭಾವನೆಯುಂಟಾಗಿತ್ತು.

ಹೀಗಾಗಿ ಕಡೆಗೆ ಇಷ್ಟ ಪಡದ ಸ್ತ್ರೀಯನ್ನು ಬಲವಂತ ಪಡಿಸಿದರೆ ಹತ್ತು ತಲೆಗಳೂ ಉರುಳುತ್ತವೆಂಬ ಶಾಪವನ್ನೇ ಪಡೆದನು.

ಈ ರಾವಣಾಸುರನ ಪತ್ನಿಯ ಹೆಸರು ಮಂಡೋದರಿ. ಇವಳು ಮಯನ ಮಗಳು. ಅವಳು ಗಂಡನ ಹಿತವನ್ನು ಬಯಸಿ ಆಗಾಗ ರಾವಣನಿಗೆ ಒಳ್ಳೆಯ ಮಾತುಗಳನ್ನು ಹೇಳುತ್ತಿದ್ದಳು. ರಾವಣನ ಸವತಿ ತಮ್ಮನಾದ ವಿಭೀಷಣನೂ ಉತ್ತಮ ಗುಣದವನು. ಅವನು ಕೂಡಾ ರಾವಣನಿಗೆ ಹಿತವನ್ನು ಹೇಳುತ್ತಿದ್ದನು. ಆದರೆ ರಾವಣನು ಒಬ್ಬರ ಮಾತನ್ನು ಕೇಳುವವನಲ್ಲ. ತನಗೆಲ್ಲಾ ಗೊತ್ತೆಂಬ ಅಹಂಕಾರವೇ ಹೆಚ್ಚಾಗಿರುವವನು.

ವಿಂಧ್ಯಪರ್ವತಕ್ಕೆ ದಕ್ಷಿಣದಲ್ಲಿರುವ ಭೂಭಾಗವೂ, ಸಮುದ್ರವೂ, ದ್ವೀಪಗಳೂ ರಾವಣರಾಜ್ಯವೆಂದು ಲಂಕಾ ಮಹಾ ಸಾಮ್ರಾಜ್ಯವಾಗಿದ್ದಿತು. ಅಲ್ಲಿ ರಾಕ್ಷಸ ಸಮೂಹಗಳು ವಾಸವಾಗಿರುತ್ತ, ನರಭಕ್ಷಕರಾಗಿ, ಆರ್ಯಾವರ್ತದಲ್ಲಿ ಯಜ್ಞಯಾಗಾದಿಗಳು ನಡೆಯದಂತೆ ಧ್ವಂಸ ಕಾರ್ಯ ಮಾಡುತ್ತ, ಋಷಿಗಳಿಗೆ ಚಿತ್ರಹಿಂಸೆ ನೀಡುತ್ತ ಅಟ್ಟಹಾಸ ಮಾಡಿ ವಿನೋದಿಸಿಕೊಂಡಿದ್ದರು.

ಕೃಶಧ್ವಜನೆಂಬ ರಾಜರ್ಷಿ ವೇದಪಾರಾಯಣ ಮಾಡಿಕೊಂಡಿದ್ದಾಗ ಹುಟ್ಟಿದ ವೇದವತಿ ಎಂಬ ಕನ್ಯೆ ವಿಷ್ಣುವೇ ತನ್ನ ಗಂಡನಾಗಬೇಕೆಂದು ಬಯಸಿ ತಪಸ್ಸು ಮಾಡುತ್ತಿದ್ದಳು. ಆಗ ರಾವಣನು ಅವಳನ್ನು ನೋಡಿ, ವಿಷ್ಣುವಿಗಿಂತಲೂ ತಾನೇ ಅಧಿಕನೆಂದು ಹೇಳಿ, ತನ್ನೊಂದಿಗೆ ಬಾರೆಂದು ಅವಳ ತಲೆ ಮುಡಿಗೆ ಕೈ ಹಾಕಿ ಎಳೆದನು.

ಆಗ ವೇದವತಿ, "ದುರಾತ್ಮಾ ! ನೀನು ಮುಟ್ಟಿದ ಈ ಶರೀರವನ್ನು ತ್ಯಜಿಸುತ್ತೇನೆ. ನಿನ್ನ ಲಂಕೆಯಲ್ಲಿಯೇ ನಾನು ಹುಟ್ಟಿ ನಿನ್ನ ಸರ್ವನಾಶಕ್ಕೆ ಕಾರಣಳಾಗುತ್ತೇನೆ. ವಿಷ್ಣುವೇ ನನ್ನನ್ನು ವರಿಸುತ್ತಾನೆ." ಎಂದು ಹೇಳುತ್ತ ಯೋಗಾಗ್ನಿಯನ್ನು ಧಳ್ಳುರಿಸಿಕೊಂಡು ಅದರಲ್ಲೇ ದಗ್ಧಳಾಗಿ ಹೋದಳು.

ರಾಕ್ಷಸರನ್ನು ನಿರ್ಮೂಲಮಾಡಿ ಲೋಕ ಕಲ್ಯಾಣ ಮಾಡಬೇಕೆಂಬ ಉದ್ದೇಶದಲ್ಲಿ ಮಹಾ ವಿಷ್ಣು ಅವತಾರ ಎತ್ತ ಬೇಕಾದ ಕಾಲವು ಬಂದಿತು. ವಿಷ್ಣು ಮಾನವನಾಗಿಯೂ, ದೇವತೆಗಳೆಲ್ಲಾ ವಾನರರಾಗಿಯೂ ಜನ್ಮತಾಳಿದರು.





# ಅಂಗರಕ್ಷಕ

ನೂರಾರು ವರ್ಷಗಳ ಹಿಂದೆ ಪುಳಿಂದ ರಾಜ್ಯವನ್ನು ಸುಗುಣಸಿಂಹನೆಂಬ ರಾಜನು ಪಾಲಿಸಿಕೊಂಡಿದ್ದನು. ಅವನು ನಲುವತ್ತು ವರ್ಷಗಳಷ್ಟು ದೀರ್ಘ ಕಾಲದ ವರೆಗೂ ರಾಜ್ಯವಾಳಿದನು. ಆ ನಲುವತ್ತು ವರ್ಷಗಳವರೆಗೂ ಪ್ರಜೆಗಳು ಸಮಸ್ತ ಸಿರಿ ಸಂಪತ್ತುಗಳಿಂದ, ಸುಖಿಸಂತೃಪ್ತರಾಗಿ ಕಾಲಕಳೆದಿದ್ದರು.

ಸುಗುಣಸಿಂಹನು ವೃದ್ಧನಾದನು. ಇನ್ನು ಮೇಲೆ ರಾಜ್ಯಭಾರವನ್ನು ಮಗನ ಹೆಗಲಿಗೆ ಹಾಕಿ, ತಾನು ದೈವ ಚಿಂತನೆಯಲ್ಲಿ ಕಾಲಕ್ಷೇಪ ಮಾಡಬೇಕೆಂದು ರಾಜನಿಗೆ ಆಲೋಚನೆ ಉಂಟಾಯಿತು. ತನ್ನ ಮಗನು ಹೇಗೆ ರಾಜ್ಯವಾಳುವನೋ ? ಇದನ್ನೇ ಆಲೋಚಿಸಿಕೊಂಡು, ಹುಣ್ಣಿಮೆಯ ಆ ರಾತ್ರಿಯಲ್ಲಿ ರಾಜನು ಅಂತಃಪುರದಲ್ಲಿ ಅತ್ತಿತ್ತ ಸರಿದಾಡಿಕೊಂಡಿದ್ದನು. ಆಗ ಕೋಟೆಯ ಗಂಟೆ ಖಂಗು ಖಂಗನೆ ಹನ್ನೆರಡು ಸಾರಿ ಮೊಳಗಿತು.

ಇನ್ನು ಮಲಗಬೇಕೆಂದುಕೊಂಡು ರಾಜನು ತನ್ನ ಹಂಸತೂಲಿಕಾತಲ್ಪದ ಕಡೆಗೆ ತಿರುಗಿದನು. ಅಲ್ಲಿ ಕಣ್ಣುಗಳು ಜಗ್ಗೆನ್ನಿಸುವ ದೃಶ್ಯ ! ಅಪ್ಪಟ ಬಂಗಾರದ ಬಣ್ಣದ ದೇಹಕಾಂತಿಯಿಂದ ಜಗಜಗಿಸುವ ಸುಂದರಿಯೊಬ್ಬಳು ಆ ತಲ್ಪದ ಮೇಲೆ ಕುಳಿತುಕೊಂಡಿದ್ದಳು. ಸುಗುಣಸಿಂಹನು ಆ ಹೊಸಬಳನ್ನು ನೋಡಿ ದಂಗಾಗಿ ನಿಂತನು.

"ನಾನಾರೆಂದು ತಿಳಿಯಲಿಲ್ಲವೇ ಮಹಾರಾಜಾ ?" ಎಂದು ಮಂಜುಲ ಸ್ವರದಿಂದ ಮುಗುಳು ನಗುತ್ತ ಅವಳು ಕೇಳಿದಳು. ರಾಜನು ಏನೂ ಹೇಳದೆ ಅವಳನ್ನೇ ನೋಡುತ್ತಾ ನಿಂತನು.

"ನನ್ನ ಹೆಸರು ಯಶಸ್ವಿನಿ. ಯಶೋದೇವತೆಯಪ್ಪಾ ನಾನು. ನೀನು ಧರ್ಮ ಮಾರ್ಗವು ತಪ್ಪದಂತೆ ರಾಜ್ಯಪಾಲನೆ ಮಾಡಿಸಿ, ನಿನ್ನ ಕೀರ್ತಿಯನ್ನು ದಶದಿಶೆಗಳಲ್ಲಿ ವ್ಯಾಪಿಸುವಂತೆ ಮಾಡಿದವಳು ಯಾರೆಂದುಕೊಂಡೆ ? ನಾನೇ " ಎಂದಳವಳು.

ರಾಜನು ಬಹಳ ಸಂತೋಷಪಟ್ಟು, "ದೇವೀ, ನನ್ನ ಕೀರ್ತಿಯನ್ನು ಎತ್ತಿ ನಿಲ್ಲಿಸಿರುವ ನಿನಗೆ ಬಹಳ ಕೃತಜ್ಞನಾಗಿದ್ದೇನೆ. ಆದರೆ ನನ್ನ ತರುವಾಯ ನನ್ನ ಕುಮಾರನ ಪಾಲನೆಯಲ್ಲಿ ಧರ್ಮವು ಹೇಗೆ ನಡೆಯುವುದೋ ಎಂದು ನನಗೆ ಚಿಂತೆಯಾಗಿದೆ. ಈ ಚಿಂತೆಯಿಂದ ನಿದ್ರೆಯೇ ಬರುವುದಿಲ್ಲ. ನನ್ನ ಕಾಲವು ಆಗಿ ಹೋಯಿತಪ್ಪೆ ?" ಎಂದನು.

೨೫ ವರ್ಷಗಳ ಹಿಂದಿನ ಚಂದಮಾಮ ಕಥೆ



ಅದಕ್ಕೆ ಯಶೋದೇವತೆ, "ರಾಜಾ, ಏಕೆ ಚಿಂತಿಸುವೆ ? ನಿನ್ನನ್ನು ನಡೆಯಿಸಿದ ಹಾಗೆಯೇ ನಿನ್ನ ಕುಮಾರನನ್ನೂ ನಡೆಯಿಸುತ್ತೇನೆ. ನಿನ್ನ ಚಿಂತೆಯನ್ನು ತಿಳಿದೇ ಇದನ್ನು ಹೇಳುತ್ತೇನೆ. ಇನ್ನು ಚಿಂತೆಬಿಡು, ನೆಮ್ಮದಿಯಾಗಿರು" ಎಂದು ಹೇಳಿ ಯಶೋದೇವಿ ಅಂತರ್ಧಾನಳಾದಳು.

ಅನಂತರ ಕೆಲವು ದಿನಗಳಲ್ಲಿ ಸುಗುಣಸಿಂಹನು ತೀರಿಹೋದನು. ಅವನ ಕುಮಾರನಾದ ಶೀಲಸಿಂಹನು ಸಿಂಹಾಸನವನ್ನು ಏರಿದನು. ಎಲ್ಲಾ ವಿಧದಲ್ಲಿ ತಂದೆಯ ಆದರ್ಶತೆಯನ್ನು ಹಿಡಿದು ಪರಿಪಾಲನೆ ನಡೆಸುತ್ತ, ಶೀಲಸಿಂಹನು ತಂದೆಗೆ ತಕ್ಕ ಮಗನೆನ್ನಿಸಿದನು. ತಂದೆಯ ಕಾಲದಿಂದಲೂ ಇದ್ದ ವೃದ್ಧ ಮಂತ್ರಿ ಧರ್ಮಪಾಲನನ್ನೇ ಆಸ್ಥಾನದಲ್ಲಿ ಪ್ರಧಾನ ಸಲಹಾದಾರನನ್ನಾಗಿ ನಿಯಮಿಸಿಕೊಂಡಿದ್ದನು. ಎಲ್ಲವೂ ಚೆನ್ನಾಗಿಯೇ ನಡೆಯುತ್ತಿದ್ದಿತು. ಹೀಗಿರುವಾಗ ಒಂದು ಹುಣ್ಣಿಮೆಯ ದಿನ ರಾತ್ರಿ ಸುಗುಣಸಿಂಹನಿಗೆ ಕಾಣಿಸಿದ ಯಶೋದೇವತೆ, ಶೀಲಸಿಂಹನಿಗೆ ಕೂಡಾ ಹಂಸತೂಲಿಕಾತಲ್ಪದ ಮೇಲೆ ಪ್ರತ್ಯಕ್ಷಳಾದಳು. ಶೀಲಸಿಂಹನು ಅವಳು ಯಾರೆಂದು ತಿಳಿದು ಭಕ್ತಿಯನ್ನೂ ವಿನಯವನ್ನೂ ಪ್ರದರ್ಶಿಸಿದನು. ಯಶೋದೇವಿ ಶೀಲಸಿಂಹನನ್ನು ಆಶೀರ್ವದಿಸುತ್ತ, "ಕಂದಾ, ನೋಡು, ಈ ಉಂಗುರವೇ ನಿನಗೆ ಅಂಗರಕ್ಷೆಯಾಗಿರುತ್ತದೆ. ಯಾವಾಗ ನಿನ್ನ ಬುದ್ಧಿ ಧರ್ಮಮಾರ್ಗ ತಪ್ಪಿ ವಕ್ರ ಮಾರ್ಗ ಹಿಡಿಯುವುದೋ ಆಗ ಈ ಉಂಗುರವು ನಿನ್ನ ಬೆರಳನ್ನು ಒತ್ತುತ್ತದೆ. ಈ ಎಚ್ಚರಿಕೆಯನ್ನು ಗುರುತಿಸಿ, ತಪ್ಪನ್ನು ತಿಳಿದು ತಿದ್ದಿಕೊಂಡು ನಡೆಯುತ್ತಿರು. ನಿನಗೂ ನಿನ್ನ ದೇಶಕ್ಕೂ ಒಳ್ಳೆಯದಾಗಲಿ." ಎಂದು ಹಿತಬೋಧನೆ ಮಾಡಿ, ಒಂದು ಉಂಗುರವನ್ನು ಕೊಟ್ಟು ಅಂತರ್ಧಾನಳಾದಳು.

ತನ್ನ ಮೇಲೆ ದೇವಿಯ ದಯೆಯುಂಟಾದುದನ್ನು ನೋಡಿ ಶೀಲಸಿಂಹನಿಗೆ ಗರ್ವವೆನಿಸಿತು. ತನ್ನ ಅಂಗರಕ್ಷೆಯಾಗಿ ಆಕೆ ಕೊಟ್ಟ ಉಂಗುರವನ್ನು ಬಹಳ ಆನಂದದಿಂದ ಧರಿಸಿಕೊಂಡನು.

ಉಂಗುರದ ಮಹಿಮೆಯಿಂದಲೂ, ಮಂತ್ರಿ ಧರ್ಮಪಾಲನ ಹಿತ ಚಿಂತನೆಯ ಸಲಹೆಯಿಂದಲೂ, ಶೀಲಸಿಂಹನ ರಾಜ್ಯಪಾಲನೆ ಬಹಳ ಕಾಲ ಒಳ್ಳೆಯ ರೀತಿಯಲ್ಲಿ ಸಾಗಿಕೊಂಡು ಬಂತು. ಬರಬರುತ್ತ ಎಷ್ಟೋ ದೃಢ ಮನಸ್ಕನಾಗಿದ್ದರೂ, ಯುವಕನಾದ ಶೀಲಸಿಂಹನಲ್ಲಿ ರಾಜ್ಯಕಾಂಕ್ಷೆ ಆಗಾಗ ತಲೆಯೆತ್ತ ತೊಡಗಿತು.

ರಾಜ್ಯಕಾಂಕ್ಷೆಯ ತುರಿಕೆಯಿಂದಾಗಿ ಶೀಲಸಿಂಹನ ಮನಸ್ಸು ಪೂರ್ತಿ ಆಸೆಗೆ ದಾಸವಾಗಿ ಹೋಯಿತು. ಧರ್ಮಾಧರ್ಮ ವಿಚಕ್ಷಣೆಯ ಜ್ಞಾನ ನಶಿಸಿತು. ದುರಾಶೆ ಧ್ವಜವೆತ್ತಿ ಹಾರಿತು. ದುಷ್ಟ ಸಂಕಲ್ಪಗಳಿಗೆ ಬಲಿಕೊಡುವ ಪರಿವಾರದವರೆಲ್ಲಾ ಅವನ ಸುತ್ತಲೂ ಸೇರಿದರು.



ಅವನ ದುಷ್ಟ ಪರಿವಾರದ ಸೇನೆಗೆ ಧುಂದುಭಿ ಎಂಬವನು ನಾಯಕನಾದನು. ಅವನಿಗೂ ರಾಜನಿಗೂ ನಿಕಟ ಸ್ನೇಹವಾಯಿತು. "ರಾಜನಾದವನಿಗೆ ರಾಜ್ಯ ವಿಸ್ತರಣೆಯೇ ಪರಮ ಧರ್ಮ. ಅವನ ಪ್ರಜ್ಞೆ ಅದಕ್ಕಾಗಿಯೇ ಶ್ರಮಿಸಬೇಕು." ಎಂದು ದುಂದುಭಿ ದುರ್ಬೋಧನೆ ಮಾಡಿ ಶೀಲಸಿಂಹನನ್ನು ಕೆರಳಿಸಿ ಕೊಂಡೇ ಬಂದನು. ದುಂದುಭಿ ಹೇಳುವ ಬೋಧನೆಗಳ ಮುಂದೆ, ವೃದ್ಧ ಮಂತ್ರಿ ಧರ್ಮಪಾಲನ ಮಾತುಗಳಾವುದೂ ಶೀಲಸಿಂಹನ ಕಿವಿಗೆ ಏರಲಿಲ್ಲ. ಅದು ವೃದ್ಧನ ಅಪಲಾಪವೆನಿಸಿತು.

ಅವನು ಕ್ರಮವಾಗಿ ಮಂತ್ರಿಯ ಮಾತುಗಳನ್ನು ನಿರಾಕರಿಸಿ ತನಗೆ ತೋರಿದಂತೆ ಮಾಡಲು ತೊಡಗಿದನು. ಕಾರಣವೇನಿಲ್ಲದೆ, ಅನ್ಯಾಯವಾಗಿ ನೆರೆ ಹೊರೆಯ ಸಣ್ಣ ಸಣ್ಣ ಸಾಮಂತರಾಜರ ಮೇಲೆ ದಾಳಿ ತೆಗೆದು, ಅವರನ್ನೆಲ್ಲ ಸೋಲಿಸುವುದನ್ನೇ ಮುಖ್ಯ ಕೆಲಸವಾಗಿಟ್ಟುಕೊಂಡನು. ಹಟವೂ, ಮೊಂಡುತನವೂ, ಕ್ರೌರ್ಯವೂ ಅವನಲ್ಲಿ ಚೆನ್ನಾಗಿ ವಿಜೃಂಭಣೆಗೊಂಡುವು.

ಅವನು ತೀರಾ ವ್ಯತಿರಿಕ್ತ ಸ್ಥಿತಿಯನ್ನೇ ಹೊಂದಿದನೆಂದರೂ ಅತಿಶಯೋಕ್ತಿಯಲ್ಲ. ಅವನ ಅಂಗರಕ್ಷಕವಾದ ಉಂಗುರವು ಎಷ್ಟು ಒತ್ತಿದರೂ ಅವನು ಅದನ್ನು ಲಕ್ಷ್ಯಮಾಡಲಿಲ್ಲ.

ಈಗಿನ ಶೀಲಸಿಂಹನು ಮೊದಲಿದ್ದ ಶೀಲಸಿಂಹನಲ್ಲವೆಂದು ಎಲ್ಲರೂ ಹೇಳಿಕೊಳ್ಳತೊಡಗಿದರು. ಮೊದಲಿನ ಶೀಲಸಿಂಹನ ಶರೀರದಲ್ಲಿ ಯಾವುದೋ ಕ್ರೂರ ಭೂತವು ಸೇರಿಕೊಂಡಿರುವಂತೆ ಎಲ್ಲರಿಗೂ ತೋರುತ್ತಿತ್ತು. ಇವನು ಏಕೆ ಹೀಗಾದನೆಂದು ತಿಳಿಯದೆ ಅನೇಕರು ಆಶ್ಚರ್ಯ ಪಡುತ್ತಿದ್ದರು. ಒಂದರಮೇಲೊಂದಾಗಿ ಯುದ್ಧಗಳನ್ನು ಮಾಡುವ ತನ್ನ ಆಸೆಗಾಗಿ, ಇನ್ನೂ ಇತರ ವಿನೋದಗಳಿಗಾಗಿ ಹೊಸ ಹೊಸ ತೆರಿಗೆಗಳನ್ನು ಪ್ರಜೆಗಳ ಮೇಲೆ ವಿಧಿಸಿದನು. ರಾಜನಲ್ಲಿ ಉಂಟಾದ ಈ ಭಯಂಕರ ಮಾರ್ಪಾಡಿನಿಂದ ಪ್ರಜೆಗಳು ಯಮಯಾತನೆ ಅನುಭವಿಸಬೇಕಾಗಿ ಬಂತು. ಪ್ರಭುವಿನ ಮೇಲೆ ಜನರಿಗಿರುವ ವಿಶ್ವಾಸವು ಸಡಿಲಾಯಿತು. ಅವನ ದುಷ್ಟಚರ್ಯೆಗಳನ್ನು ಸಹಿಸಲಾಗದ ಅವನ ಸ್ವಂತ ಸೇನೆಗಳೇ, ಅಸಂಹಿಸಿಕೊಂಡು ಇದಿರು ತಿರುಗಲು ತೊಡಗಿದುವು.

ಇಷ್ಟೆಲ್ಲ ಆದರೂ ಕಡೆಗೆ ಶೀಲಸಿಂಹನಿಗೆ ತನ್ನ ಮೇಲೆ ತನಗೇ ಅಸಹ್ಯ ಹುಟ್ಟುವಂತಹ ಕ್ಲಿಷ್ಟ ಪರಿಸ್ಥಿತಿ ಉಂಟಾಯಿತು. "ಲೋಕಕ್ಕೆ ಇದಿರಾಗಿ ಈಗ ನಾನೇಕೆ ಈ ರಾಜ್ಯಗಳನ್ನು ಜಯಿಸಬೇಕಿತ್ತು? ಪಾಪ, ಅಷ್ಟು ಮಂದಿ ಸಣ್ಣ ಸಣ್ಣ ರಾಜರನ್ನು ಹೊಡೆದು ಬಗ್ಗಿಸಿ ಗೆದ್ದು ಅವರ ರಾಜ್ಯಗಳನ್ನು ಅನ್ಯಾಯವಾಗಿ ನನ್ನ ರಾಜ್ಯದೊಂದಿಗೆ ಏಕೆ ಬೆರೆಸಿ ಕೊಂಡೆನು? ಯಾವ ಪುಣ್ಯ ಕಟ್ಟಿಕೊಳ್ಳಲಿಕ್ಕೆ ಪಾಪದ ಪ್ರಜೆಗಳ ಮೇಲೆ ಇಷ್ಟೊಂದು ತೆರಿಗೆ

ಹಾಕಿ ಪೀಡಿಸಿದೆನು ?" ಎಂದು ತನಗೆ ತಾನೇ ಪ್ರಶ್ನೆಗಳನ್ನು ಕೇಳಿಕೊಂಡನು. ಆ ಪ್ರಶ್ನೆಗಳಿಗೆಲ್ಲಾ ತಕ್ಕ ಉತ್ತರಕೊಡಲು ಮನಸ್ಸಿನಿಂದಾಗಲಿಲ್ಲ. ಹಿತಚಿಂತಕನಾದ ವೃದ್ಧ ಮಂತ್ರಿ ಧರ್ಮಪಾಲನ ಸಲಹೆಗಳನ್ನು ತಿರಸ್ಕರಿಸಿ, ದೇವಿ ಪ್ರಸಾದಿಸಿದ ಉಂಗುರವು ಎಷ್ಟು ಸಾರಿ ಒತ್ತಿಯೊತ್ತಿ ಹೇಳಿದರೂ ಲಕ್ಷ್ಯ ಮಾಡದೆ. ತನ್ನ ಗರ್ವದ ಕಾರ್ಯಗಳನ್ನು ನೆನೆದು ಶೀಲಸಿಂಹನು ಪಶ್ಚಾತ್ತಾಪ ಪಡತೊಡಗಿದನು.

ಹೀಗಿರುವಾಗ ವೃದ್ಧ ಮಂತ್ರಿ ಧರ್ಮಪಾಲನು ತೀರಿಹೋದನು. ಶೀಲಸಿಂಹನಿಗೆ ತಿಳಿಯದಂತೆಯೇ, ಮೊದಲು ಹಿತಚಿಂತಕರಂತೆ ದುರ್ಬೋಧನೆ ಮಾಡಿದ ಮಿತ್ರರು ರಾಜ್ಯದ ಭಾಗಗಳನ್ನು ತಮ್ಮ ಹಸ್ತಗತ ಮಾಡಿಕೊಳ್ಳತೊಡಗಿದರು. ರಾಜ್ಯದಲ್ಲಿ ಕೊಲೆಗಳೂ ಕೊಳ್ಳೆಗಳೂ ವಿಪರೀತವಾದುವು. ಒಂದು ದಿನ ರಾಜಭವನದೊಳಗೇ ಕಲಹದ ಗಲಾಟೆ ಎದ್ದಿತು. ಈ ಕಲಹದಿಂದ ನಗರದೊಳಗೆಲ್ಲಾ ಗೊಂದಲ ವೆದ್ದಿತು. "ಏನು ವಿಪರೀತ ಇದೆಲ್ಲಾ ?" ಎಂದು ಶೀಲಸಿಂಹನು ಯಾರನ್ನೋ ಕೇಳಿದನು. "ಇನ್ನೇನಿದೆ ರಾಜಾ ! ನಿಮ್ಮ ಮಾವನ ಮಗಳು ಪಾವನಿಯನ್ನು ಗಲ್ಲಿಗೇರಿಸುತ್ತಿದ್ದಾರೆ !" ಎಂದರು ಭಟರು.

ಯಾವುದೋ ಸ್ವಪ್ನದಿಂದ ಎಚ್ಚರವಾದಂತೆ ಶೀಲಸಿಂಹನಿಗೆ ತೋರಿತು. ಉಂಗುರವು ಅವನ ಕೈಯನ್ನು ಒತ್ತಿಕೊಂಡೇ ಇತ್ತು. ಕೂಡಲೇ ಪಾವನಿಯನ್ನು ತನ್ನ ಬಳಿಗೆ ಬರಮಾಡಿಸಿದನು. ಅವಳ ದೀನಾವಸ್ಥೆಯನ್ನು ನೋಡಿ ಧಾರೆಧಾರೆಯಾಗಿ ಕಣ್ಣೀರಿಳಿಸಿದನು. ಮಿತ್ರರು ಮಾಡಿದ ದುಸ್ತಂತ್ರಗಳನ್ನು ಅವಳಿಂದ ತಿಳಿದು ತಕ್ಷಣವೇ ಅವರೆಲ್ಲರನ್ನೂ ಹಿಡಿಸಿ ಬಂದೀ ಮಾಡಿಸಿದನು.

ಈ ಸಾರಿ ಅವನ ಬೆರಳನ್ನು ಗಟ್ಟಿಯಾಗಿ ಒತ್ತಿಕೊಂಡಿದ್ದ ಉಂಗುರವು, ಥಕ್ಕನೆ ವಿಚಿತ್ರವಾದ ಕಾಂತಿಯಿಂದ ಬೆಳಗಿತು. ಅದೇ ಕ್ಷಣದಲ್ಲಿ ಶೀಲಸಿಂಹನಿಗೆ ಜ್ಞಾನೋದಯವಾಯಿತು.

ತನ್ನನ್ನು ಕಾಪಾಡುವ ಅಂಗರಕ್ಷಕ ಉಂಗುರವನ್ನು ಪೂರ್ತಿ ನಂಬಿ ಕಣ್ಣಿಗೆ ಒತ್ತಿಕೊಂಡನು. ದೇವಿಯ ಪ್ರಭಾವವನ್ನು ತಿಳಿದುಕೊಂಡನು. ತಂದೆಯ ಕೋರಿಕೆಯನ್ನು ನೆನಪಿಗೆ ತಂದುಕೊಂಡನು. ಅಂದಿನಿಂದ ಧರ್ಮಮಾರ್ಗ ಬಿಟ್ಟು ನಡೆಯಲಾರೆನೆಂದು ಪ್ರತಿಜ್ಞೆ ಮಾಡಿಕೊಂಡನು.

ಅಷ್ಟೇ ಅಲ್ಲ, ತನ್ನಿಂದ ಸೋತು ಅವಮಾನಿತನಾದ ಪುಷ್ಕಲನನ್ನು ಬಹಳ ಗೌರವದಿಂದ ಆದರಿಸಿ ಸತ್ಕರಿಸಿ, ತಾನೇ ವಶಪಡಿಸಿಕೊಂಡ ಅವನ ಮಾಳವ ರಾಜ್ಯವನ್ನು ಅವನಿಗೇ ಕೊಟ್ಟು ಕಳುಹಿಸಿದನು. ಹಾಗೆಯೇ ಇತರ ರಾಜ್ಯಗಳ ದೊರೆಗಳನ್ನೂ ಉಪಚರಿಸಿದನು.



# ವೃತ್ತಿ–ಪ್ರವೃತ್ತಿ

**ಕಂ**ದುರುವಳ್ಳಿ ಎಂಬ ಗ್ರಾಮಕ್ಕೆ ರಾಮಚಂದ್ರಯ್ಯ ಗ್ರಾಮಾಧಿಕಾರಿಯಾಗಿದ್ದ. ಆ ಪದವಿ ಅವನ ಕುಟುಂಬಕ್ಕೆ ಹಿರಿಯರ ಕಾಲದಿಂದ ಪರಂಪರೆಯಾಗಿ ಸಂಕ್ರಮಿಸಿಕೊಂಡು ಬಂದಿತ್ತು.

ರಾಮಚಂದ್ರಯ್ಯನಿಗೆ ಇಬ್ಬರು ಗಂಡು ಮಕ್ಕಳು. ಇಬ್ಬರೂ ಚೆನ್ನಾಗಿ ಓದಿಕೊಂಡು ಗ್ರಾಮದಲ್ಲಿ ಮರ್ಯಾದೆಯನ್ನೂ ಮನ್ನಣೆಯನ್ನೂ ಹೊಂದುತ್ತಿದ್ದರು.

ರಾಮಚಂದ್ರಯ್ಯನಿಗೆ ವಯಸ್ಸಾಗುತ್ತಿದ್ದಂತೆ, ಸಹನೆ ತಗ್ಗುತ್ತಾ ಹೋಯಿತು. ತನ್ನ ಇಬ್ಬರು ಮಗಂದಿರಲ್ಲಿ ಹಿರಿಯ ಕಿರಿಯ ಎಂಬುದನ್ನು ನೋಡದೆ ತಕ್ಕ ಅರ್ಹತೆಯುಳ್ಳವನಿಗೇ ಗ್ರಾಮಾಧಿಕಾರಿಯ ಪದವಿಯನ್ನು ಬಿಟ್ಟು ಕೊಡಬೇಕೆಂದು ಭಾವಿಸಿದನು. ಎಷ್ಟು ಯೋಚಿಸಿದರೂ ಆ ಪದವಿಗೆ ಇಬ್ಬರೂ ಸಮಾನವಾದ ಅರ್ಹತೆಯುಳ್ಳವರಾಗಿ ಅವನಿಗೆ ಕಾಣುತ್ತಿದ್ದರು.

ಈ ವಿಷಯದಲ್ಲಿ ಸಲಹೆ ಕೇಳಲು ರಾಮಚಂದ್ರಯ್ಯ ತನ್ನ ಬಾಲ್ಯದ ಮಿತ್ರನಾದ ನೆರೆಯ ಗ್ರಾಮದ ಅಧಿಕಾರಿಯನ್ನು ತನ್ನ ಬಳಿಗೆ ಕರೆಯಿಸಿಕೊಂಡನು.

ಅವರಿಬ್ಬರೂ ಮಾತಾಡಿಕೊಂಡಿರುವಾಗ, ರಾಮಚಂದ್ರಯ್ಯನ ಹಿರಿಯ ಮಗನು ತಂದೆಯ ಬಳಿಗೆ ಬಂದು, "ಅಪ್ಪಾ, ಪಕ್ಕದ ಊರಿನ ಉತ್ಸವಕ್ಕೆ ನಾನೂ ನನ್ನ ಸ್ನೇಹಿತರೂ ಹೋಗುತ್ತೇವೆ. ಅವರು ಅಡ್ಡದಾರಿಯಿಂದ ಅಲ್ಲಿಗೆ ಹೋಗಬೇಕೆಂದು ಹೇಳುತ್ತಾರೆ. ಅದು ನನಗೆ ಇಷ್ಟವಿಲ್ಲದೆ ಹೋದರೂ ಅವರ ಒತ್ತಾಯದಿಂದ ಸರಿ ಅಂದುಬಿಟ್ಟೆ. ತಮ್ಮನು ಮಾತ್ರ ಆ ದಾರಿ ಚೆನ್ನಾಗಿಲ್ಲ, ತಾನು ಮಾಮೂಲು ದಾರಿಯಲ್ಲೇ ಹೋಗುತ್ತೇನೆ ಅನ್ನುತ್ತಾನೆ." ಎಂದು ಹೇಳಿ ಹೊರಟುಹೋದನು.

ಆ ಮಾತು ಕೇಳಿ ಪಕ್ಕದ ಗ್ರಾಮಾಧಿಕಾರಿ ರಾಮಚಂದ್ರಯ್ಯನೊಂದಿಗೆ, "ಗೊತ್ತಾಯಿತಲ್ಲ ? ಸ್ನೇಹಿತರ ಒತ್ತಾಯದಿಂದ ಅಡ್ಡದಾರಿ ತುಳಿಯುವವನು ಗ್ರಾಮಾಧಿಕಾರಿಯಾಗಿರಲು ಯೋಗ್ಯನಲ್ಲ. ಆ ಪದವಿಯನ್ನು ಎರಡನೆಯ ಮಗನಿಗೇ ಕೊಟ್ಟುಬಿಡಿ" ಎಂದನು.

ರಾಮಚಂದ್ರಯ್ಯನ ಸಮಸ್ಯೆ ತೀರಿತು. ಅವನ ಎರಡನೆಯ ಮಗನೇ ಗ್ರಾಮಾಧಿಕಾರಿಯಾದನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೩ ನವೆಂಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



Devidas Kasbeker



Madana Gopal

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಸೆಪ್ಟೆಂಬರ್ ೧೦ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

### ಜುಲೈ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ನಟನೆಯ ಭಯ ನೋಡು

ಎರಡನೇ ಫೋಟೋ : ನಿಜವಾದ ಭಯ ಓಡು !

ಕಳುಹಿಸಿದವರು : ಹೆಚ್. ಆರ್. ವಿಜಯ, ಬಲ್ಮಠ, ಮಂಗಳೂರು

ಬಹುಮಾನ ರೂ. ೫೦/- ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ ? ಉತ್ತರಗಳು :

೧. ಕಲಕತ್ತಾ. ೨. ರೋಮ್‌ನಗರ. ಇದು ಏಳು ಬೆಟ್ಟಗಳ ಮೇಲೆ ನಿರ್ಮಿಸಲ್ಪಟ್ಟಿದೆ. ೩. ಶಾನ್ ಫ್ರಾನ್ಸಿಸ್ಕೋ (ಅಮೆರಿಕಾ) ೪. ಕೊಲೋನ್, ಮಾಗೀಗಳ ಸ್ಮಶಾನ ವಾಟಿಕೆ ೫. ಕೆನಡಾದಲ್ಲಿಯ ಮಾಂಟ್ರಿಯಾಲ್ ನಗರ. ನಗರದೊಳಗಿನ ಬೀದಿಗಳಿಗೆಲ್ಲಾ ಸಾಧುಗಳ ಹೆಸರಿನ ಸಂಬಂಧವಿರುವುದರಿಂದ ಈ ನಗರಕ್ಕೆ ಈ ಹೆಸರು. ೬. ಇಟಲಿಯ ಪಾವಿಯಾ ನಗರ. ನಗರವೆಲ್ಲಾ ಶಿಖರಮಯವಾಗಿರುವುದರಿಂದ ಈ ಹೆಸರು ಬಂದಿದೆ.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.




೪

[ ಪಿಂಗಳನು ಪದ್ಮಪಾದನೊಂದಿಗೆ ಭಲ್ಲೂಕಪರ್ವತಗಳ ಕಡೆಗೆ ಹೊರಟನು. ಪಿಶಾಚ ಕತ್ತೆಗಳ ಮೇಲೆ ಅವರು ಪ್ರಯಾಣಮಾಡುವಾಗ, ದಾರಿಯಲ್ಲಿ ಪಿಂಗಳನು ಮಾತ್ರ ಸ್ನಾನಮಾಡಿ ಬರುವೆನೆಂದು ಒಂದು ಕೊಳದ ಹತ್ತಿರ ಹೋದನು. ಅಲ್ಲಿ ಬಂಧಿಸಲ್ಪಟ್ಟ ಭಲ್ಲೂಕ ಕೇತು ಎಂಬುವನು ತನ್ನನ್ನು ಬಂಧ ಮುಕ್ತ ಮಾಡುವಂತೆ ಪಿಂಗಳನನ್ನು ಪ್ರಾರ್ಥಿಸಿದನು. ಪಿಂಗಳನು ಅದಕ್ಕೆ ಸಿದ್ಧನಾದಾಗ ಹಿಂದಿನಿಂದ ಪದ್ಮಪಾದನು ಅವನನ್ನು ಕೂಗಿ ತಡೆದನು.—]

ಅವಸರದಿಂದ ತನ್ನನ್ನು ಕೂಗಿ ತಡೆದ ಪದ್ಮಪಾದನ ಧ್ವನಿಯನ್ನು ಕೇಳಿ, ಪಿಂಗಳನು ಬೆಚ್ಚಿಬಿದ್ದು ಹಿಂದಿರುಗಿ ನೋಡಿದನು. ಬಂಧಿಸಲ್ಪಟ್ಟವನ ಸಂಕಲೆಯನ್ನು ಮುರಿಯಲು ಕೈಗೆತ್ತಿಕೊಂಡ ಕಲ್ಲು ಪಿಂಗಳನ ಕೈಯಿಂದ ಅವನಿಗೆ ತಿಳಿಯದಂತೆ ಜಾರಿ ಕೊಳದಲ್ಲಿ ಬಿದ್ದು ದೊಡ್ಡ ಶಬ್ದವಾಯಿತು. ಅಕಸ್ಮಾತ್ತಾಗಿ ಆದ ಆ ಶಬ್ದದಿಂದ ಪಿಂಗಳನು ಮತ್ತಿಷ್ಟು ಬೆಚ್ಚಿಬಿದ್ದನು.

ಅಷ್ಟರಲ್ಲಿ ಸಮೀಪಕ್ಕೆ ಬಂದ ಪದ್ಮಪಾದನು ಕೋಪದಿಂದ ಪಿಂಗಳನನ್ನು ನೋಡುತ್ತ, "ಪಿಂಗಳಾ, ಅವನು ಯಾರೆಂದು ಅಂದುಕೊಂಡೆ ? ಯಾರಾದರೂ ದೈನ್ಯಭಾವ ತೋರಿಸಿದ ಕೂಡಲೇ ಹಿಂದು ಮುಂದು ಯೋಚಿಸದೆ ಮಾಡಿಬಿಡುವುದೇನು ? " ಎಂದು ಪ್ರಶ್ನಿಸಿದನು.

ಪಿಂಗಳನು ಒಂದುಸಾರಿ ಭಲ್ಲೂಕ ಕೇತುವನ್ನು ನೋಡಿ, ಸುಮ್ಮನೆ ತಲೆ ತಗ್ಗಿಸಿ ನಿಂತನು, ಕಳವು ಮಾಡುವಾಗಲೇ ಸಿಕ್ಕಿಬಿದ್ದವನ ಹಾಗೆ, ನಾಚಿಗೆಯಾಗಿತ್ತು ಅವನಿಗೆ. ಗುರುವಿನ ಮುಂದೆ ಅಪರಾಧ ಮಾಡಿದ ಶಿಷ್ಯನ ಹಾಗಾಯಿತು ಅವನ ಸ್ಥಿತಿ.

ಆಗ ಭಲ್ಲೂಕ ಕೇತು ಪದ್ಮಪಾದನನ್ನು ಅನುಮಾನದಿಂದ ನೋಡುತ್ತ, "ಸ್ವಾಮೀ, ತಾವು ಯಾರು?



ಒಂದು ಪುಣ್ಯ ಕಾರ್ಯ ಮಾಡಲಿದ್ದ ಈ ಯುವಕ ನನ್ನು ಹೀಗೇಕೆ ತಡೆಯುತ್ತೀರಿ ? " ಎಂದು ಕೇಳಿದನು.

"ಪುಣ್ಯ ಕಾರ್ಯವೇ!" ಎಂದು ಪದ್ಮಪಾದನು ದೊಡ್ಡ ದನಿಯಿಂದ ನಕ್ಕು, "ನೀನು ಯಾರೆಂಬು ದನ್ನು ನಾನರಿಯೆನೆಂದುಕೊಂಡೆಯಾ ? ನನ್ನ ಹತ್ತಿರ ನಿನ್ನ ವಿನಯ ವಿಧೇಯತೆಗಳೊಂದೂ ನಡೆಯು ಲಾರದು. ನಿನ್ನನ್ನು ಕುರಿತು ಸರ್ವಸ್ವವನ್ನೂ ನಾನು ಎಂದೋ ತಿಳಿದಿದ್ದೇನೆ." ಎಂದು ಮತ್ತಿಷ್ಟು ನಕ್ಕನು.

ಕೂಡಲೇ ಪಿಂಗಳನು ಅವಮಾನವನ್ನು ತೊಡೆದು ಕೊಳ್ಳುವ ದಾರಿ ತಿಳಿದು. "ಇವನ ಹೆಸರು ಭಲ್ಲೂಕ ಕೇತುವಂತೆ. ನಾವು ಹೋಗತಕ್ಕ ಭಲ್ಲೂಕ ಪರ್ವತ ಗಳಿಗೆ ಇವನು ಅಧಿಪತಿಯಾಗಿದ್ದನಂತೆ. ಯಾವನೋ ಒಬ್ಬ ದೊಡ್ಡ ಮಾಂತ್ರಿಕನಿಂದ ತನಗೆ ಈ ದುರವಸ್ಥೆ ಬಂತೆಂದು ಹೇಳಿದ. ಅಷ್ಟು ದೊಡ್ಡವನಿಗೆ ಇಂಥಾ ಗತಿ ಬಂದದ್ದು ನೋಡಿ ಸಹಿಸಲಾಗದೆ ಅವನನ್ನು ಬಿಡಿಸಲು ನೋಡಿದೆ" ಎಂದನು.

"ಹೌದು ಹೌದು. ಒಬ್ಬಾನೊಬ್ಬ ಮಾಂತ್ರಿಕನಿಂದ ಇವನಿಗೆ ಈ ಗತಿ ಬಂದುದು ನಿಜವೇ. ಆ ಒಬ್ಬಾ ನೊಬ್ಬ ಮಾಂತ್ರಿಕನು ಯಾರೆಂದು ನೀನು ಬಲ್ಲೆಯಾ ಪಿಂಗಳಾ ? ಅವನಿಂದ ಇವನಿಗೆ ಏಕೆ ಈ ಗತಿ ಬಂತೆಂಬುದು ನಿನಗೆ ಗೊತ್ತೇ ? ಅಂತಹ ಮುಖ್ಯ ಸಂಗತಿ ತಿಳಿಯದೆ ಇವನ ಮಾತು ಮಾತ್ರ ಕೇಳಿ ಇವನನ್ನು ಬಿಡಿಸಲು ಮುಂದಾದೆಯಲ್ಲಾ ? " ಎಂದು ಪ್ರಶ್ನಿಸಿದನು ಪದ್ಮಪಾದ.

ತಿಳಿಯದು ಎಂಬಂತೆ ತಲೆಯಾಡಿಸಿ ಪಿಂಗಳನು ಭಲ್ಲೂಕ ಕೇತುವಿನ ಕಡೆಗೆ ನೋಡಿದನು.

"ಈ ಭಲ್ಲೂಕ ಕೇತುವನ್ನು ಹಿಡಿದು ಕಬ್ಬಿಣದ ಸಂಕಲೆಯಿಂದ ಇಲ್ಲಿರುವ ಬಂಡೆಗಲ್ಲಿಗೆ ಕಟ್ಟಿದವನು, ಒಬ್ಬಾನೊಬ್ಬ ಮಂತ್ರಗಾರನಲ್ಲ. ಬಹು ದೊಡ್ಡ ಮಂತ್ರಗಾರನಾದ ಮಹಾಮಾಯನು." ಎಂದು ಪದ್ಮಪಾದನು ಭಲ್ಲೂಕ ಕೇತುವನ್ನು ಸುಡುವ ಹಾಗೆ ತೀಕ್ಷ್ಣ ದೃಷ್ಟಿಯಿಂದ ನೋಡಿದನು.

ಭಲ್ಲೂಕ ಕೇತು ಆ ಮಾತುಗಳನ್ನು ಕೇಳಿ, ಕೋಪ ದಿಂದ ಹಲ್ಲು ಕಟಕಟ ಕಡಿಯುತ್ತ, "ನೀನಾರು ? ನನ್ನ ಸಂಗತಿಗಳೆಲ್ಲ ನಿನಗೆ ಹೇಗೆ ಗೊತ್ತಾಯಿತು? ಆ ಮಹಾಮಾಯನ ವೃತ್ತಾಂತವನ್ನು ನಿನಗೆ ಯಾರು ಹೇಳಿದರು ? ನೀನೇಕೆ ಈ ಕಡೆಗೆ ಬಂದೆ ? ನೀನು ಕೂಡಾ ಮಂತ್ರಗಾರನೇನೂ ಅಲ್ಲವಷ್ಟೆ ? " ಎಂದು ತೀವ್ರ ಸ್ವರದಿಂದ ಕೇಳಿದನು.

"ಹೌದು. ನಾನೂ ಮಂತ್ರಗಾರನೇ. ನನ್ನ ಹೆಸರು ಪದ್ಮಪಾದ. ಮಹಾಬಲಶಾಲಿಯಾಗಿ ಪಾತಾಳ ತಂತ್ರಿಯಾದ ನಿನ್ನನ್ನು ಜಯಿಸಿ, ನಿನ್ನನ್ನು ಈ ಬಂಡೆ ಗಲ್ಲಿಗೆ ಬಂಧಿಸಿದ ಆ ಮಹಾಮಾಯನ ಸಮಾಧಿಯ ಮೇಲೆಯೇ ದಾಳಿಮಾಡಲು ನಾನು ಹೊರಟಿದ್ದೇನೆ" ಎಂದನು ಪದ್ಮಪಾದ.

"ಹೌದೇನು? ಮಹಾಮಾಯನ ಸಮಾಧಿಯ ಮೇಲೆಯೇ ನೀವಿಬ್ಬರೂ ದಾಳಿ ಹೋಗುವವರೇ ?

ಅದು ನಿಜವೇ ಆದರೆ, ನೀವು ಮಹಾಮಂತ್ರವಾದಿಗಳಿರಬೇಕು. ಹಾಗಾದರೆ ನನ್ನ ವಿಜ್ಞಾಪನೆಯನ್ನು ಲಾಲಿಸಿರಿ. ಆ ಮಹಾಮಾಯನ ಬದ್ಧ ಶತ್ರುವಾದ ನನ್ನ ಸಹಾಯ ನಿಮಗೆ ಅಗತ್ಯವಾಗಿರುತ್ತದೆ. ಅದಕ್ಕಾಗಿ ನನ್ನನ್ನು ಈ ಕಷ್ಟದಿಂದ ಬಂಧಮುಕ್ತ ಮಾಡಿಬಿಡಿ. ಯಾವಾಗಲೂ ನಿಮ್ಮ ದಾಸನಾಗಿರುತ್ತೇನೆ." ಎಂದನು ಭಲ್ಲೂಕ ಕೇತು.

"ನಿನ್ನ ಸುಳ್ಳು ಪೊಳ್ಳು ಮಾತುಗಳನ್ನು ನಂಬಿಬಿಡುವಷ್ಟು ಮೂರ್ಖನಲ್ಲ ನಾನು. ಮೊದಲೇ ಹೇಳಿದೆನಲ್ಲಾ ನಿನ್ನನ್ನು ಪೂರ್ತಿ ಬಲ್ಲೆನೆಂದು ?" ಎಂದನು ಪದ್ಮಪಾದನು ನಗುತ್ತಾ.




ಪಿಂಗಳನು ಪದ್ಮಪಾದನ ಬಳಿಗೆ ಬರುತ್ತ, "ಪದ್ಮಪಾದರೇ. ಇವನನ್ನು ನಾವು ಕಾಪಾಡಬಹುದೆಂದೇ ಕಾಣುತ್ತದೆ. ಕಾರಣವೇನೆಂದರೆ, ಹೇಳಿದ ಮಾತು ತಪ್ಪಿದರೆ ತಲೆಯೊಡೆದು ಹೋಗುತ್ತದೆಂದು ಯಾರೋ ಅವನಿಗೆ ಶಾಪ ಕೊಡಾ ಕೊಟ್ಟಿದ್ದಾರಂತೆ" ಎಂದನು.

"ಅವನು ಹೇಳಿದ ಆ ಮಾತು ನಂಬಿಯೇ ನೀನು ಅಪಾಯದಲ್ಲಿ ಸಿಕ್ಕಿಕೊಳ್ಳಲು ಸಿದ್ಧನಾದೆ. ಮಹಾಮಾಯನ ಹತ್ತಿರವಿದ್ದ ಮಂತ್ರಶಕ್ತಿಯ ವಸ್ತುಗಳು ನಮ್ಮದಾಗುವವರೆಗೂ ಈ ಭಲ್ಲೂಕ ಕೇತುವನ್ನು ಬಿಡುಗಡೆ ಮಾಡಲೇ ಕೂಡದು. ಮೊದಲು ಆ ವಸ್ತುಗಳು ನಮ್ಮದೆಂದಾಗಲಿ. ಆಮೇಲೆ ಬೇಕಾದರೆ ಇವನನ್ನು ನಮ್ಮ ದಾಸನಾಗಿ ಮಾಡಿಕೊಳ್ಳಬಹುದು" ಎಂದನು ಪದ್ಮಪಾದ.

"ಹಾಗಾದರೆ ಸ್ವಾಮೀ..." ಎಂದು ಭಲ್ಲೂಕ ಕೇತು ಏನೋ ಹೇಳಲು ನೋಡುವಾಗ, ಪದ್ಮಪಾದನು ಅವನನ್ನು ತಡೆದು, "ಭಲ್ಲೂಕಾ, ನಿನ್ನ ನಯವಿನಯ ವಿಧೇಯತೆಗಳಾವುದೂ ನನ್ನನ್ನು ಮೋಸಪಡಿಸಲಾರವು. ಮಹಾಮಾಯನು ಸಮಾಧಿಗೊಂಡ ಪಾಳು ದೇವಳದೊಳಗೆ ನಾನು ಪ್ರವೇಶಿಸಿದ ಮೇಲೆ, ನಿನ್ನನ್ನು ಈ ಬಂಧನದಿಂದ ಬಿಡುಗಡೆ ಮಾಡುತ್ತೇನೆ. ಅದುವರೆಗೂ ನೀನು ಇಲ್ಲಿ ಕಟ್ಟುಗೊಂಡಿರಲೇ ಬೇಕು !" ಎಂದು ಹೇಳಿ ಹಿಂದಿರುಗಿದನು. ಪಿಂಗಳನೂ ಅವನ ಹಿಂದೆಯೇ ಹೊರಟನು. "ಅಯ್ಯೊ ! ನನ್ನ ಹಣೆಬರಹವೇ ! ಹೂಂ !" ಎಂದು ಭಲ್ಲೂಕ ಕೇತು ಹಣೆ ಚಚ್ಚಿಕೊಂಡುದು ಕೇಳಿಸಿತು.

ಅವರು ಕತ್ತೆಗಳನ್ನು ಬಿಟ್ಟು ಕೆಳಗಿಳಿದ ಜಾಗಕ್ಕೆ ಬಂದರು. ಅಲ್ಲಿ ಹಸಿರು ಹುಲ್ಲುಗಾವಲಿನ ನೆಲಹಚ್ಚಗಿತ್ತೇ ಹೊರತು ಕತ್ತೆಗಳು ಈಗ ಕಾಣಲೇ ಇಲ್ಲ. ಪಿಂಗಳನು ಆಶ್ಚರ್ಯ ಪಡುತ್ತ ಸುತ್ತುಮುತ್ತಲೂ ನೋಡಿ, "ಪದ್ಮಪಾದರೇ, ನಮ್ಮ ಪಿಶಾಚಿ ವಾಹನಗಳು ಎಲ್ಲಿವೆ ? ಈ ಪ್ರಾಂತದಲ್ಲಿಯೇ ಮೇದುಕೊಂಡಿರಬಹುದೆಂದುಕೊಂಡಿದ್ದೆ. ಕಾಣುವುದಿಲ್ಲವೇಕೆ ?" ಎಂದನು.

"ಅವು ಕತ್ತೆಗಳ ರೂಪದಲ್ಲಿರುವ ಪಿಶಾಚಿಗಳೇ ಹೊರತು ನಿಜವಾದ ಕತ್ತೆಗಳಲ್ಲವಷ್ಟೆ ? ಅಂಥವುಗಳು




ಹುಲ್ಲು ಮೇದು ಹೊಟ್ಟೆ ತುಂಬಿಸುತ್ತವೇನು ? ಅವೆರಡೂ ಆಹಾರ ಸಂಪಾದನೆಗೆ ಹೋಗಿವೆ. ಈಗ ನಮ್ಮ ಹೊಟ್ಟೆಯ ಸಂಗತಿ ನೋಡಬೇಕು." ಎಂದು ಪದ್ಮಪಾದನು ಹೊಟ್ಟೆ ತಡವಿಕೊಳ್ಳುತ್ತ ನೆಲದಲ್ಲಿ ಹಾಸಿರುವ ಮೆತ್ತಗಿನ ಜಮಖಾನೆಯಂತಹ ಹಸಿರು ಹುಲ್ಲುಗಳ ಮೇಲೆ ಕುಳಿತು, ಪಿಂಗಳನನ್ನೂ ಕುಳಿತುಕೊಳ್ಳುವಂತೆ ಸನ್ನೆ ಮಾಡಿದನು.

ಪಿಂಗಳನು ಕೂಡಾ ಅವನ ಪಕ್ಕದಲ್ಲೇ ಕುಳಿತು, "ಅದು ನಿಜವೇ. ನನಗೂ ಒಳ್ಳೆಯ ಹಸಿವೆಯಾಗುತ್ತಾ ಇದೆ. ನಾವು ನಮ್ಮೊಂದಿಗೆ ಆಹಾರ ತಂದುಕೊಳ್ಳಲು ಮರೆತುಬಿಟ್ಟೆವು. ಈಗ ಈ ಕಾಡಿನಲ್ಲಿ ತಿನ್ನುವಂಥಾದ್ದು ಏನಿದೆಯೋ ಹುಡುಕಬೇಕಾಯಿತು. ಅಪ್ಪಣೆಯಾಗಲಿ" ಎಂದನು.

ಪದ್ಮಪಾದನು, ಪಿಂಗಳನು ಆಹಾರ ಹುಡುಕಲು ಅಪ್ಪಣೆ ಕೇಳಿದುದನ್ನು ನೋಡಿ ನಕ್ಕು, "ಪಿಂಗಳಾ, ನನ್ನ ಅಪ್ಪಣೆ ಕೇಳು. ಅಗೋ ಅಲ್ಲಿರುವ ಆ ಕಂದು ಬಣ್ಣದ ಚೀಲವನ್ನು ಇತ್ತ ತೆಗೆದುಕೊಂಡು ಬಾ" ಎಂದು ಸಮೀಪವಿದ್ದ ಚೀಲವನ್ನು ತೋರಿಸಿದನು.

ಪಿಂಗಳನು ಆ ಚೀಲವನ್ನು ಎತ್ತಿಕೊಂಡು, ಅದರೊಳಗೆ ಕೈ ತೂರಿಸಿ ಏನಿದೆಯೋ ಎಂದು ಹುಡುಕಿದನು. ಖಾಲೀ ಚೀಲವನ್ನು ನೋಡಿ ನಿರಾಶೆಯಾಯಿತು. ಅದರೊಳಗೆ ತಿಂಡಿ ತುಂಬಿಸಲು ಮರೆತನೋ ಅಥವಾ ಅದನ್ನೆತ್ತಿಕೊಂಡು ಗೆಡ್ಡೆಗೆಣಸು ಕಿತ್ತು ತರಲು ಹೇಳುವನೇನೋ ಎಂದುಕೊಂಡನು. ಅಷ್ಟರಲ್ಲಿ ಪದ್ಮಪಾದನು ಆ ಚೀಲವನ್ನು ತೆಗೆದುಕೊಂಡು, "ಪಿಂಗಳಾ, ನಿನಗೆ ಯಾವ ಬಗೆಯ ಭೋಜನ ಬೇಕು ? ಯಾವ ಯಾವ ಭಕ್ಷ್ಯಗಳು ಬೇಕು ? ನೆನೆದುಕೋ, ಕೇಳಿಕೋ. ದಾಕ್ಷಿಣ್ಯಪಡಬೇಡ" ಎಂದನು ನಗುತ್ತ.

"ಬಗೆಬಗೆಯ ತಿಂಡಿಗಳೇ! ಉರಿಯುವ ಹೊಟ್ಟೆಗೆ ಒಂದಿಷ್ಟು ಚಟ್ನೀ ಅನ್ನ ಸಿಕ್ಕಿದರೇ ಬ್ರಹ್ಮಾಂಡವಾಯ್ತು. ಈ ಚೀಲದಲ್ಲಿ ಏನಿದೆ ಮಣ್ಣು? ಎಲ್ಲಾ ನೆನೆಯುತ್ತಾ ಹೊಟ್ಟೆ ತುಂಬಿತೆಂದು ಕೂಡಾ ನೆನೆಯಬೇಕೇನು ?" ಎಂದನು ಪಿಂಗಳ.

ಪದ್ಮಪಾದನು ಚೀಲದ ಬಾಯಿ ಬಿಡಿಸಿ, ಅದರೊಳಗೆ ಮುಖವಿಟ್ಟು, ಮೆಲ್ಲಗೆ ಏನೋ ಮಂತ್ರವನ್ನು ಗೊಣಗಿ, "ಪಿಂಗಳಾ! ಈಗ ಚೀಲದೊಳಗೆ ಏನಿದೆಯೋ ನೋಡು" ಎಂದು ಚೀಲವನ್ನು ಪಿಂಗಳನ ಮುಂದಿಟ್ಟನು.

ಪಿಂಗಳನು ಆತುರದಿಂದ ಚೀಲದೊಳಗೆ ಕೈ ಹಾಕಿದನು. ಅವನ ಕೈಗೆ ಬಿಸಿಬಿಸಿಯಾದ ಒಂದು ಬೆಳ್ಳಿಯ ಪಾತ್ರ ತಗಲಿತು. ಅದನ್ನು ಹೊರಗೆತ್ತಿದಾಗ, ಅದರಲ್ಲಿ ಮಲ್ಲಿಗೆ ಮೊಗ್ಗೆಗಳಂತಹ ಅನ್ನ ತುಂಬಿತ್ತು. ಅವನು ಆಶ್ಚರ್ಯಪಡುತ್ತ ಪದ್ಮಪಾದನನ್ನು ನೋಡಿದನು.

ಪದ್ಮಪಾದನು ನಗುತ್ತ, "ನಿನಗೆ ಬೇಕಾದುದೆಲ್ಲವೂ ಪಲ್ಯ, ಚಟ್ನಿ, ಹುಳಿ, ಸಾರು, ಕೂಟು

ಪಾಯಸ ಕೂಡಾ ಆ ಚೀಲದಲ್ಲಿವೆ. ಬೇಗ ಬೇಗ ಹೊರಗೆ ತೆಗೆದಿಡು. ಎರಡು ಬಗೆ ಸಿಹಿ ಭಕ್ಷ್ಯಗಳೂ ಇವೆ ನೋಡು " ಎಂದನು.

ಹತ್ತು ನಿಮಿಷ ಕಳೆಯುವುದರೊಳಗೆ ಪಿಂಗಳನು ಆ ಚೀಲದೊಳಗಿನಿಂದ ಇಪ್ಪತ್ತೈದು ಬಗೆಯ ಮೇಲೋಗರ ಪದಾರ್ಥಗಳನ್ನು ಹೊರಗೆ ತೆಗೆದನು. ಪಾಯಸ ಕೂಡಾ! ಚೆನ್ನಾಗಿ ಹಸಿದುಕೊಂಡಿದ್ದ ಪದ್ಮಪಾದನೂ ಪಿಂಗಳನೂ ಲಕ್ಷಣವಾಗಿ ಕುಳಿತು ಊಟ ಮುಗಿಸಿ ತೃಪ್ತಿಯಿಂದ ತೇಗಿದರು. ಅನಂತರ ತುಂಬಿದ ಹೊಟ್ಟೆಯನ್ನು ತಡವುತ್ತಾ, ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಂಡು, ಮತ್ತೆ ಎದ್ದು ಮುಂದಿನ ಪ್ರಯಾಣಕ್ಕೆ ಸಿದ್ಧರಾದರು.

ಪದ್ಮಪಾದನು ಒಂದು ಚಿಟಿಕೆ ಮಣ್ಣು ತೆಗೆದುಕೊಂಡು ಮಂತ್ರಿಸಿ, ಭೂಮಿಯ ಮೇಲೆ ಹಾಕಿದ ಕೂಡಲೇ, ಫಟಫಟನೆ ಭೂಮಿ ಒಡೆಯಿತು. ಆ ಸೀಳಿನೊಳಗಿನಿಂದ ಕತ್ತೆಯ ರೂಪದ ಎರಡು ಪಿಶಾಚಿಗಳು ಭೀಕರವಾಗಿ ಗಾಂಧ್ರಿಸುತ್ತಾ ಮೇಲೆ ಬಂದುವು. ಅವು ಮೊದಲಿನ ಕತ್ತೆಗಳೇ. ಇಬ್ಬರೂ ಮೊದಲಿನಂತೆ ಆ ಕತ್ತೆಗಳ ಮೇಲೆ ಕುಳಿತು ಭಲ್ಲೂಕ ಪರ್ವತಗಳ ಕಡೆಗೆ ದಾರಿಬಿಟ್ಟರು.

ಎರಡು ಮೂರು ಗಂಟೆಗಳವರೆಗೆ ಪ್ರಯಾಣ ಸಾಗಿತು. ತರುವಾಯ ಭೂವ್ಯಾಕಾಶಗಳು ಒರೆಸಿಕೊಂಡ ಹಾಗಿರುವ ಒಂದು ಜಾಗದಲ್ಲಿ, ಕಪ್ಪಗಿನ ಹೊಗೆ ಮುತ್ತಿಕೊಂಡಿರುವುದು ಕಂಡು ಬಂತು. ಪಿಂಗಳನು ಆ ಕಡೆಗೆ ಕೈ ನೀಡಿ ತೋರಿಸುತ್ತ, "ಪದ್ಮಪಾದರೇ, ಅಲ್ಲಿ ಕಾಣುವುದು ಮೋಡವೋ, ಹೊಗೆಯೋ ? ವಿಚಿತ್ರವಾಗಿ ಕದಲುತ್ತಾ ಇದೆ !" ಎಂದು ಕೇಳಿದನು.

ಪದ್ಮಪಾದನು ಸ್ವಲ್ಪ ಹೊತ್ತು ಆ ಕಡೆಗೆ ಪರೀಕ್ಷಿಸಿ ನೋಡಿ, "ಪಿಂಗಳಾ, ಅದು ಮೋಡವೂ ಅಲ್ಲ, ಹೊಗೆಯೂ ಅಲ್ಲ. ಭಲ್ಲೂಕ ಪರ್ವತಗಳಿರುವ



ಪ್ರದೇಶದಲ್ಲಿ ಕಾವಲಾಗಿರುವ ರಾಕ್ಷಸ ಗಣ! ಬಹುಶಃ ಅವರೆಲ್ಲ ನಮ್ಮ ಬರುವಿಕೆಯನ್ನು ತಿಳಿದು ನಮ್ಮನ್ನು ಹೆದರಿಸಲು ಪ್ರಯತ್ನಿಸುವ ಹಾಗೆ ಕಾಣುತ್ತದೆ. ನಾವೀಗ ಎಲ್ಲಿಗೆ ಬರಬೇಕೋ ಅಲ್ಲಿಗೆ ಬಂದಿದ್ದೇವೆ. ಎಚ್ಚರವಿರಬೇಕಾದ ಸಮಯ ಬಂತು " ಎಂದನು.

ಪದ್ಮಪಾದನ ಮಾತು ಮುಗಿಯಿತೆನ್ನುವಷ್ಟರಲ್ಲಿ, ಅವರ ಇದಿರು ಸುಮಾರು ಐವತ್ತು ಗಜಗಳಷ್ಟು ದೂರದಲ್ಲಿ ಕಪ್ಪಗಿನ ಹೊಗೆಯ ಉಂಡೆಯೊಂದು ಭೂಮಿಯ ಮೇಲಿನಿಂದ ಗುಂಡಗೆ ಆಕಾಶಕ್ಕೆದ್ದು, ಸುಳಿ ತಿರುಗುತ್ತ ತಾಳೇ ಮರದ ಪ್ರಮಾಣದಷ್ಟಾಗಿ ನಿಂತಿತು. ಪಿಂಗಳನು ಹೆದರಿ ನಡುಗುತ್ತ ಪದ್ಮಪಾದನನ್ನು ನೋಡಿದನು.

ಪದ್ಮಪಾದನು ಏನೋ ಮಂತ್ರವನ್ನು ಉಚ್ಚರಿಸುತ್ತ, ತಾನು ಏರಿದ ಕತ್ತೆಯನ್ನು ಆ ಕಡೆಗೆ ಓಡಿಸಿದನು. ಮರುಕ್ಷಣದಲ್ಲಿ ಕರಿ ಹೊಗೆಯ ಕಂಬ ಮಾಯವಾಯಿತು.

ಪದ್ಮಪಾದನು ಪಿಂಗಳನನ್ನು ನೋಡಿ, "ಪಿಂಗಳಾ, ಹೆದರಬೇಡ. ಇಕೋ, ನಿನಗೆ ರಕ್ಷೆಯಾಗಿ ಈ ಕತ್ತಿಯನ್ನು ಕೊಡುತ್ತೇನೆ. ನಿನ್ನನ್ನು ಯಾವ ರೂಪದಿಂದ ಇದಿರಿಸಲು ಬರುವ ರಾಕ್ಷಸನನ್ನಾದರೂ ನೀನು ಇದರಿಂದ ಹೊಡೆದು ಸಂಹರಿಸಿಬಿಡಬಹುದು" ಎಂದು ಪಿಂಗಳನ ಕೈಗೊಂದು ಕತ್ತಿಯನ್ನು ಕೊಟ್ಟನು. ಅದೇ ಕ್ಷಣದಲ್ಲಿ ಅವರಿಬ್ಬರ ನಡುವೆ ಇದ್ದ ಭೂಮಿ ನಡುಗಿತು.

ಪದ್ಮಪಾದನೂ ಪಿಂಗಳನೂ ಹಿರಿಕೊಂಡಿದ್ದ ಕತ್ತಿಗಳೆರಡೂ ಆಚೆಯ ಬದಿಗೆ ಓಡಿದುವು. ಮರುಕ್ಷಣದಲ್ಲಿ ಮಾರುದ್ದದ ದಂತಗಳೊಂದಿಗೆ, ಶರೀರವೆಲ್ಲಾ ಜಡೆಗೂದಲು ತುಂಬಿದ ದೊಡ್ಡದೊಂದು ಆನೆ ಘೀಂಕರಿಸುತ್ತಾ, ಪಿಂಗಳನ ಮೇಲೆ ಹಾರಿತು.

ಪಿಂಗಳನು ಸ್ವಲ್ಪವೂ ಹಿಂಜರಿಯದೆ ತನ್ನ ಕೈಯಲ್ಲಿದ್ದ ಕತ್ತಿ ಬೀಸುತ್ತ ಆನೆಯ ಮೇಲೆ ಹಾರಿದನು. ಕೂಡಲೇ ಆನೆ ಮಹಾ ಸಂಕಟ ಅನುಭವಿಸುವಂತೆ ಶಬ್ದ ಮಾಡಿ, ಕ್ಷಣ ಮಾತ್ರದಲ್ಲಿ ಕರ್ರಗಿನ ಹೊಗೆಯಾಗಿ ಮಾರ್ಪಟ್ಟು ಸುಳಿಸುಳಿ ತಿರುಗುತ್ತಾ ದೂರ ಓಡಿಹೋಯಿತು. ಇದು ಪಿಂಗಳನಿಗೆ ತಮಾಷೆಯ ಆಟದಂತಾಗಿ "ಹೋ!" ಎಂದು ಆನಂದದಿಂದ ಕೂಗಿದನು, ಕತ್ತಿಯನ್ನು ಕುಣಿಸುತ್ತಾ.

"ಭೇಷ್! ಪಿಂಗಳಾ! ಯುವಕನಾದವನು ತೋರಿಸಬೇಕಾದ ಧೈರ್ಯವೆಂದರೆ ಇದೇ. ಸೊಪ್ಪಿನ ಶಬ್ದದ ಪೆಟ್ಟಿಗೆ ಪಿಶಾಚಿಯೂ ಓಡುತ್ತದೆನ್ನುವುದು ಇದಕ್ಕೇ. ನಿನಗೆ ಕೊಟ್ಟ ಕತ್ತಿಯಲ್ಲಿ ಯಾವ ಮಂತ್ರಶಕ್ತಿಯೂ ಇಲ್ಲ. ಆದರೆ ಮುಂದಾಗಿ ಆ ಮಾತು ಹೇಳಿದ್ದರೆ, ನೀನು ಇಷ್ಟು ಧೈರ್ಯದಿಂದ ಆ ಮಾಯಾ ಗಜವನ್ನು ಇದಿರಿಸುತ್ತಿದ್ದಿಲ್ಲ. ಈಗ ತಿಳಿಯಿತೆ? ಕತ್ತಿಯಲ್ಲಿ ಯಾವುದೂ ಇಲ್ಲ. ಎಲ್ಲಾ ಇರುವುದು ಎದೆಯಲ್ಲಿಯೇ! ಧೈರ್ಯಶಾಲಿಗಳನ್ನು ಬಗ್ಗಿಸಲು ಯಾರಿಗೂ ಸಾಧ್ಯವಿಲ್ಲ" ಎಂದನು ಪದ್ಮಪಾದ.

ಪಿಂಗಳನು ತನ್ನ ಕೈಯಲ್ಲಿದ್ದ ಕತ್ತಿಯನ್ನು ಒಂದು ಸಾರಿ ಆಶ್ಚರ್ಯದಿಂದ ನೋಡಿ, "ಈ ಕತ್ತಿಯಲ್ಲಿ ನಿಜಕ್ಕೂ ಮಂತ್ರಶಕ್ತಿ ಏನಿಲ್ಲವೇ? ಆದರೂ ಚಿಂತಿಲ್ಲ.



ಹರಿತವಾಗಿದೆ! ಹೇಗೆ ಬೇಕೋ ಹಾಗೆ ಬಗ್ಗುವಂಥಾದ್ದಾದರೂ ಬಲವಾಗಿದೆ. ಇದರಿಂದ ನಾನು ಸಾವಿರ ಮಂದಿ ರಾಕ್ಷಸರನ್ನಾದರೂ ಇದಿರಿಸ ಬಲ್ಲೆನು. ಜೈ ಪಾತಾಳ ಭೂತಾ!" ಎಂದು ಕತ್ತಿಯನ್ನು ಗಾಳಿಯಲ್ಲಿ ಗಿರಗಿರ ತಿರುಗಿಸಿದನು.

ಪಿಂಗಳನು ಪ್ರದರ್ಶಿಸಿದ ಧೈರ್ಯಸಾಹಸಗಳು ಪದ್ಮಪಾದನನ್ನು ಬಹಳವಾಗಿ ಆಕರ್ಷಿಸಿದುವು. ಅವನು ಪಿಂಗಳನನ್ನು ಆಪ್ಯಾಯತೆಯಿಂದ ನೋಡುತ್ತ, "ಪಿಂಗಳಾ, ನಾವೀಗ ಭಲ್ಲೂಕ ಪರ್ವತಗಳನ್ನು ಸಮೀಪಿಸಿಬಿಟ್ಟೆವು, ನಾವು ಸೇರಬೇಕಾದ ನದಿ ಈ ಪರ್ವತಗಳ ಮಧ್ಯದಲ್ಲಿರುವ ಕಣಿವೆಯಲ್ಲಿದೆ. ಕಾಲು ನಡಿಗೆಯಿಂದ ಅಲ್ಲಿಗೆ ಹೋಗಿ ಮುಟ್ಟಲು ಬಹಳ ಕಾಲ ಬೇಕಾಗುತ್ತದೆ. ಎಲ್ಲೆಲ್ಲೂ ಕಲ್ಲುಗಳು, ಹತ್ತಬೇಕು, ಇಳಿಯಬೇಕು. ಅದು ಬಹಳ ಕಷ್ಟವಾದುದರಿಂದ, ಈ ಪಿಶಾಚಿ ಕತ್ತೆಗಳನ್ನು ಬೆಟ್ಟಗಳ ಮೇಲಿನಿಂದ ಹಾರಿಸಿ, ಆ ಕಣಿವೆಗೆ ಇಳಿದುಬಿಡೋಣ. ಗಟ್ಟಿಯಾಗಿ ಕುಳಿತುಕೋ! ತಲೆ ತಿರುಗದಂತೆ ಬೇಕಾದರೆ ಕಣ್ಣು ಮುಚ್ಚಿಕೋ!" ಎಂದು ಯಾವುದೋ ಮಂತ್ರವನ್ನು ಉಚ್ಚರಿಸಿದನು.

ಪಿಂಗಳನು ಅವನ ಮಾತಿನಂತೆ ಸಿದ್ಧನಾಗುತ್ತಿರುವಾಗಲೇ ಪಿಶಾಚಿ ಕತ್ತೆಗಳೆರಡೂ ಆಕಾಶಕ್ಕೇರಿದುವು. ಅವು ಬೆಟ್ಟದ ಶಿಖರಗಳ ಮೇಲು ಭಾಗದಲ್ಲಿ ಹಾರುತ್ತಾ, ನಡುವಿನ ಕಣಿವೆಯಲ್ಲಿ ಹರಿಯುತ್ತಿದ್ದ ನದಿಯ ಬದಿಯಲ್ಲಿ ನೆಲಕ್ಕಿಳಿದುವು.

ಪದ್ಮಪಾದನೂ, ಪಿಂಗಳನೂ ವಾಹನಗಳನ್ನು ಬಿಟ್ಟು ಕೆಳಗಿಳಿದರು, ಮರುಕ್ಷಣದಲ್ಲಿ ಅವೆರಡೂ ಮಾಯವಾದುವು.

ಪದ್ಮಪಾದನು ನದಿಯ ತೀರದಲ್ಲಿ ಕುಳಿತು ಕೈಯಿಂದ ನೀರನ್ನು ಕದಲಿಸುತ್ತ, ಯಾವುದೋ ಮಂತ್ರವನ್ನು ಪಠಿಸತೊಡಗಿದನು. ಕ್ರಮವಾಗಿ ನದಿಯಲ್ಲಿ ಅಲೆಗಳು ಹುಟ್ಟಿ, ಗುಡ್ಡದಷ್ಟು ಎತ್ತರಕ್ಕೆ ಏರುತ್ತ ಹೊಗೆಯನ್ನು ಕಾರತೊಡಗಿದುವು. ಪಿಂಗಳನು ಈ ದೃಶ್ಯವನ್ನು ನೋಡುತ್ತ ಕದಲದೆ ನಿಂತಿದ್ದನು. ಸುತ್ತುಮುತ್ತಲೂ ಯಾವ ಪ್ರಾಣಿಯೂ



ಇಲ್ಲ. ನಿರ್ಮಾನುಷ್ಯ ಪ್ರದೇಶ. ಇಂತಹ ಪ್ರದೇಶದಲ್ಲಿ ಹೀಗೆ ಇರಬೇಕಾದರೆ, ಪದ್ಮಪಾದನ ಮಂತ್ರಶಕ್ತಿಗೆ ಈಡುಜೋಡಿಲ್ಲವೆಂದು ಅವನಿಗೆ ಕಾಣುತ್ತಿತ್ತು.

ಸ್ವಲ್ಪ ಹೊತ್ತಿನ ಮೇಲೆ ಪದ್ಮಪಾದನು ಈಕಡೆಗೆ ಬಂದು, ಚೀಲದೊಳಗಿರುವ ಗಾಜಿನ ಜಾಡಿಯನ್ನು ತರುವಂತೆ ಪಿಂಗಳನಿಗೆ ಹೇಳಿದನು. ಪಿಂಗಳನು ಗಾಜಿನ ಜಾಡಿಯನ್ನು ತಂದು ಪದ್ಮಪಾದನ ಮುಂದೆ ಇಟ್ಟನು. ಅದರೊಳಗೆ ಮೊಸಳೆಗಳ ರೂಪದಲ್ಲಿರುವ ಮಹಾಮಾಯನ ಶಿಷ್ಯರಿಬ್ಬರನ್ನೂ ಪದ್ಮಪಾದನು ಕಣ್ಣು ತಿರುಗಿಸಿ ನೋಡುತ್ತ, "ಇನ್ನಾದರೂ ನಿಮ್ಮ ನಿಜ ರೂಪ ಧರಿಸುವಿರಾ ? ಇಲ್ಲವೇ ಸುಟ್ಟು ಬೂದಿ ಮಾಡಿ ಈ ನದಿಯ ನೀರಿನಲ್ಲಿ ಕಲೆಸಿಬಿಡಲೆ?" ಎಂದು ಕೇಳಿ ಹೂಂಕರಿಸಿದನು.

ಕೂಡಲೇ ಗಾಜಿನ ಜಾಡಿ ಫಟೀರನೆ ಒಡೆದು ಚೂರುಗಳೆಲ್ಲಾ ಎತ್ತಲೋ ಹಾರಿ ಹೋದುವು. ಕಪ್ಪಗಿನ ವಿಕೃತಾಕಾರಿಗಳಾದ ಇಬ್ಬರು ವ್ಯಕ್ತಿಗಳು ಪ್ರತ್ಯಕ್ಷರಾಗಿ ಪದ್ಮಪಾದನಿಗೆ ನಮಸ್ಕಾರ ಮಾಡುತ್ತ "ಮಹಾ ಮಾಂತ್ರಿಕರೇ ! ನಾವು ನಿಮ್ಮ ದಾಸರು, ದಾಸರು. ಏನು ತಮ್ಮ ಅಪ್ಪಣೆ?" ಎಂದು ಕೇಳಿದರು.

"ಮಹಾಮಾಯನು ಸಮಾಧಿಯಾಗಿರುವ ಪಾಳು ದೇವಾಲಯಕ್ಕೆ ಪ್ರವೇಶಿಸ ಬೇಕಾಗಿದೆ. ಮೊದಲು ಈ ನದಿಯ ನೀರು ಬತ್ತಿ ಹೋಗುವ ಹಾಗೆ ಮಾಡಿರಿ. ನೋಡಿರೇನು ? ಇದು ನನ್ನ ಆಜ್ಞೆ !" ಎಂದು ಪದ್ಮಪಾದನು ಕಠಿಣವಾಗಿ ಉತ್ತರವಿತ್ತನು.

ಮಹಾಮಾಯನ ಶಿಷ್ಯರು ಸ್ವಲ್ಪಹೊತ್ತು ತಮ್ಮೊಳಗೆ ಮುಖ ನೋಡಿಕೊಂಡರು. ಉತ್ತರ ಹೇಳಲು ಅವರು ಹಿಂಜರಿಯುವುದನ್ನು ನೋಡಿ ಪದ್ಮಪಾದನು ಕೋಪದಿಂದ ಕಣ್ಣು ಕೆಕ್ಕರಿಸಿಕೊಂಡು "ನನ್ನ ಆಜ್ಞೆ ಕಿವಿಗೆ ಬಿದ್ದಿಲ್ಲವೇನು ? ಅಂ!" ಎಂದು ಪ್ರಶ್ನಿಸಿದನು.

ಮಹಾಮಾಯನ ಶಿಷ್ಯರು ಹೆದರಿ ಗಡಗಡಿಸುತ್ತ, ಪದ್ಮಪಾದನಿಗೆ ಕೈಮುಗಿದು, "ಈ ನದಿ ಬತ್ತಿ ಹೋಗಬೇಕಾದರೂ, ಮಹಾಮಾಯನ ಸಮಾಧಿ ಇರುವ ಪಾಳು ದೇವಾಲಯಕ್ಕೆ ಪ್ರವೇಶಿಸಬೇಕಾದರೂ, ಮೊದಲು ಪಿಂಗಳನೆಂಬ ಮೀನುಗಾರ ಯುವಕನು ಇಲ್ಲಿಗೆ ಬರಬೇಕಾಗಿರುತ್ತದೆಂದು ತಮಗೆ ತಿಳಿಯದೆ ? " ಎಂದರು.

"ಇದೋ! ಇಲ್ಲಿ ನಿಂತಿರುವವನೇ ಮೀನುಗಾರ ಪಿಂಗಳ !" ಎಂದು ಪದ್ಮಪಾದನು ಪಿಂಗಳನ ಕಡೆಗೆ ಬೆರಳು ತೋರಿಸಿದನು.

ಮಹಾಮಾಯನ ಶಿಷ್ಯರು ಪಿಂಗಳನನ್ನು ಆಶ್ಚರ್ಯದಿಂದ ನೋಡಿ, "ಮಹಾ ಪ್ರಸಾದ ! ನಿಮ್ಮ ಆಜ್ಞೆ ಈಗಲೇ ನೆರವೇರಿಸುತ್ತೇವೆ" ಎಂದು ಹೇಳಿ ಅದೃಶ್ಯರಾದರು. —(ಇನ್ನೂ ಇದೆ)

